# ಭಕ್ತಿರಹಸ್ಯ

ಅಥವಾ

## ಶ್ರೀ ಸಿದ್ಧರಾಮೇಶ್ವರ ನಾಟಕವು.



ಗೆಳೆಯರ ಗುಂಪಿನ

**ಸಿಂಪಿ ಲಿಂಗಣ್ಣ.**

**ಬೆಲೆ-ನಾಲ್ಕು ಆಣೆ**

# ಭಕ್ತಿರಹಸ್ಯ.

ಅಥವಾ

## ಶ್ರೀಸಿದ್ಧರಾಮೇಶ್ವರ ನಾಟಕವು.



ದೊಡ್ಡವರು ಇಂಥ ದೇಶದಲ್ಲೇ ಹುಟ್ಟಿಬರಬೇಕೆಂಬ ನಿಯಮವಿಲ್ಲ; ಇಂಥ ಜಾತಿಯಲ್ಲೇ ಹುಟ್ಟಬೇಕೆಂದು ಕಾಗದಪತ್ರಗಳಾಗಿಲ್ಲ; ಅಂಥವರು ಹುಟ್ಟುವುದಕ್ಕೆ ಹಳ್ಳಿಪಟ್ಟಣಗಳ ಭೇದವಿಲ್ಲ; ಬಡತನ ಸಾವುಕಾರಿಕೆಗಳ ಕಾರಣವಿಲ್ಲ."

—(ಹಳ್ಳಿಯ ಮಹಾತ್ಮ.)

ಗೆಳೆಯರ ಗುಂಪಿನ

**ಸಿಂಪೀ ಲಿಂಗಣ್ಣ.**



**ಕಾರ್ತಿಕ ೧೮೫೧**

## ಭಕ್ತಿರಹಸ್ಯ.

ಆದಿಯಾಧಾರ ಘನ ।
ಆ ಘನ ವೇಧಿಸುವುದೆ ಮನ ।
ಆ ಮನವು ಮಹದಲ್ಲಿ ನಿಂದುದೆ ಭಕ್ತಿ ॥

— ಶ್ರೀಚೆನ್ನಬಸವಣ್ಣ.

# ಪಾತ್ರ ಪರಿಚಯ.

→※○※←

| | | |
|---|---|---|
| ೧. | ಸಿದ್ಧರಾಮ | ಕಥಾನಾಯಕ. |
| ೨. | ಮುದ್ದುಗೌಡ | ಸಿದ್ಧರಾಮನ ತಂದೆಯು. |
| ೩. | ಸುಗ್ಗಲೆ | " ತಾಯಿಯು. |
| ೪. | ಚಾಮಲಿದೇವಿ | ಸೊನ್ನಲಾಪುರದ ರಾಣಿ. |
| ೫. | ವಿಶ್ವಾಸರಾಯ | ಗಾಣಪತ್ಯ ಪ್ರಮುಖನು. |
| ೬. | ವಿನಾಯಕ | " |
| ೭. | ಚೆನ್ನದೇವ | ಶ್ರೀಶೈಲಯಾತ್ರೆಯ ಯಜಮಾನ. |
| ೮. | ನೀಲಾಂಬೆ | ಚೆನ್ನದೇವನ ಪತ್ನಿ. |
| ೯. | ಶರಬಯ್ಯ | ಯಾತ್ರೆಯ ಜಂಗಮ. |
| ೧೦. | ಕಲ್ಯಾಣಿ | ಚೆನ್ನದೇವನ ಆಳು. |
| ೧೧. | ಪಾರ್ವತಿ | ಚೆನ್ನದೇವನ ಮಗಳು. |
| ೧೨. | ಭೀಮ | ದನಗಾಹಿಗಳು. |
| ೧೩. | ಸೋಮ | " |
| ೧೪. | ಹನುಮ | " |
| ೧೫. | ಗುರುಕೇದಾರ | ಸಿದ್ಧರಾಮನ ಶಿಷ್ಯರು. |
| ೧೬. | ಕಲ್ಲಿದೇವ | " |
| ೧೭. | ಜಂಗಮಮೂರ್ತಿ | ಪರ್ವತದ ಮಲ್ಲಿಕಾರ್ಜುನದೇವ. |

ಅಲ್ಲದೆ, ಗುಡ್ಡರು -- ಸೇವಕರು ಮೊದಲಾದವರು.



# ಮುನ್ನುಡಿ.



"ಗೆಳೆಯಾ ನನ್ನಂತೆ ನೋಡು, ಅಂದರೆ ಇದರ ಮರ್ಮ ಹೊಳೆದೀತು."

(ಭಕ್ತಿರಹಸ್ಯ)

ನಾಟಕವು ಇತಿಹಾಸವಲ್ಲ. ಅದು ಕಾವ್ಯ. ಒಂದು ತೋರಿಸಿ ಮತ್ತೊಂದನ್ನು ಕೈಗೆ ಹಚ್ಚುವ ಮಾಟಗಾರ್ತಿಯ ರೀತಿ ಕಾವ್ಯದ್ದು. ಸಿದ್ಧರಾಮನ ಸೋಗು; ಭಕ್ತಿಯ ರಹಸ್ಯ. ಹಿಂದಿನ ಕಥೆ; ಇಂದಿನ ಸ್ಥಿತಿ. ಪುರಾಣದ ಸಿದ್ಧರಾಮನು ಪುರಾಣಕಾಲಕ್ಕೆ ಅನುಗುಣನಾಗಿದ್ದರೆ, ಇಂದಿನ ನಾಟಕದ ಸಿದ್ಧರಾಮನು ಸದ್ಯದ ಕಾಲಕ್ಕೆ ಅನುರೂಪನು.

ಇವನು ಕೋಣೆಯಲ್ಲಿ ಕುಳಿತು ಹರಕು ಎಲೆ ಮುರುಕು ಹೂವುಗಳಿಂದ ಪೂಜಿಸುವ ಪ್ರಪಂಚಿಯಲ್ಲ. ಕೋಟೆಯಿಲ್ಲದ ರಾಜಧಾನಿಯಲ್ಲಿ ಲೆಕ್ಕವಿಲ್ಲದ ಭಾಂಡಾರವನ್ನು ಮುಟ್ಟಿ ಮಾಸದ ಮನ್ನ ಉಂಡು ಉಸುರುವ ಸವಿಗಾರನು. ಇಂದಿನವರಿಗೆ ಈ ಕಣ್ಣು ಮೂಡಬೇಕು. ಭಕ್ತಿಯ ಬಾಗಿಲು ಆಗ ತೆರೆದೀತು. ಮುಕ್ತಿ ನಿಂತ ಗಾಳಿ ಆಗ ಒಳಗೆ ಬಂದೀತು. ಈ ಜೀವ ಬಾರದವನ ಭಕ್ತಿ ನೀರುಜೇಕದ ಬಾವಿ.

ಮಯೂರನ ರೂಪ ಮಯೂರಿಗೆ ಗೊತ್ತು. ಬೇಡನೇನು ಬಲ್ಲ. ಬೇಡನಿಗೇನು ಮೊದಲೇ ಬೇಡ. ಬೇಡದೆ ಸಿಕ್ಕೀತೇ, ನೋಡದೆ ಕಂಡೀತೇ? ಕಾಮಿಗಿಂತ ಕಾಮಿಯಾಗಿ ಸೃಷ್ಟಿಯ ಸವಿಯನ್ನು ಉಣಬಲ್ಲರೆ ಅವ ಸವಿಗಾರ. ಒಡಲಿಗೆ ಬಡಕೊಳ್ಳುವ ಕಂಗಾಲ ಅದನೇನು ಬಲ್ಲ!

**ಅತ್ತಾಲಿಂದ ಬಂದೇವವ್ವಾ!**
**ಮುತ್ತಿನ ಡೇರೇ ಹೊಡದೇವವ್ವಾ।**
**ಪಾಪೀ ಕಣ್ಣಿಗಿ ಬಿದ್ದೇವವ್ವಾ।**
**ಪರದೇಶಾಗೀ ಹೋದೇವವ್ವಾ॥** (ಮಕ್ಕಳ ಒಗಟು.)

ಎಂದು ಮಲ್ಲಿಗೆ ಇಂಥವರಿಗಾಗಿ ಅಳುತ್ತದೆ.

೨

“ ಅಡವಿ ದೇವರ ಅರಮನೆ. ಅಲ್ಲಿಯ ಗಿರಿದರಿಗಳಲ್ಲಿ ಅವನು ಕೂಸಾಗಿ ಆಡಿದನು. ಅವನ ಗಾಳಿಗೊಳಲಿನ ದನಿಯು ಅಲ್ಲಿ ಝೇಂಕರಿಸುತ್ತದೆ. ತರಗೆಲೆಗಳು ತಾಳ ಬಾರಿಸುವವು. ಹೊಳೆ ಹಳ್ಳಗಳು ನರ್ತಿಸುವವು. ಪಚ್ಚರತ್ನದಂಥ ಹಚ್ಚನ್ನ ಹಸುರು ಹುಲ್ಲಿನ ಹಾಸಿಗೆಯ ಮೇಲೆ ಒರಗಿ, ಗರಿಗೆದರಿದ ಗಂಡು ನವಿಲನ್ನು ಕಣ್ತುಂಬ ನೋಡಿದರೆ ಅಪ್ಸರೆಯರ ಪೀತಾಂಬರದ ಸೆರಗಿಗಿಲ್ಲದ ಸೊಬಗು ಕಂಗೊಳಿಸುವದು. ಅದರ ತುರಾಯಿಯ ಚೆಲುವಿಕೆಯು ಅರಸನ ಕಿರೀಟನ ತುರಾಯಿಯ ಮೋರೆಯ ಮೇಲೆ ಹೊಡೆಯುವದು. ಎದೆ ಬಿಚ್ಚಿದ ಅರಳುಗಂಣಿನಂಥ ಸರೋವರದ ದಡದ ಗಿಡದ ಸಾಲಿನಲ್ಲಿ ನಿಂತರೆ ಅದೊಂದು ದೇವರಾಯನ ಅರಮನೆಯ ಅಂಗಳವೆ. ಅಲ್ಲಿ ಶುಕಪಿಕಗಳ ಮಂದಮಂದ ಕಿಲಿಕಿಲಿಯಲ್ಲಿ ನೆಲಮುಗಿಲೆಲ್ಲ ಒಂದೆ ಬಾಯಿಂದ ಕುಲುಕುಲು ಕೂಸಿನಂತೆ ನಗುತ್ತಿರುವದು. ಇರುಳಲ್ಲಿ ಇಂದ್ರನೀಲದ ನೆಲಗಟ್ಟಿನ ಮೇಲೆ ಅರಳುಮಲ್ಲಿಗೆ ಉದುರಿಸಿದಂತೆ ಚಿಕ್ಕೆಗಳು ತಮ್ಮೊಳಗೇ ತಾವು ಸೂಸುನಗೆ ಬೀರಿ ಸೂಚು ಮಾಡುತ್ತಿರುವಾಗ ಆಗ ಏನಿದೆ, ಎಲ್ಲಾ ನಿಶ್ಶಬ್ದ. ಉಡಾಳ ಗಾಳಿ ಕೂಡ ಬೆರಗಾಗಿ ಆಗ ಬೆಪ್ಪಾಗಿ ನಿಂತಿರುತ್ತದೆ. ಆ ದಟ್ಟ ನಿಶ್ಶಬ್ದತೆಯೊಡನೆ ಆತ್ಮವೊಂದೇ ಮೌನದಿಂದ ಭಕ್ತಿಗೀತವನ್ನು ಹಾಡುತ್ತಿರುತ್ತದೆ. ತರುಮರಗಳು ಎವೆ ಬಡೆಯದೆ ಮೈಯ್ಯುಲುಕದೆ ಆ ಅಶ್ರುತ ವೀಣಾರವದ ಕಡೆಗೇ ಕಿವಿಗೊಟ್ಟು ಕೇಳುತ್ತ ಎಚ್ಚರುದಪ್ಪಿ ನಿಂತುಕೊಂಡಿರುತ್ತವೆ.” (ಆಹಾ! ಹಾಹಾ!! ಸೈ ಸೈ !!!)

ಇಂಥ ಭಕ್ತಿಯ ಭಾಂಡಾರದಲ್ಲಿ ಬೆಳೆದವ ಸಿದ್ಧರಾಮ. ಅವನಲ್ಲಿ ತಾರ್ಕಿಕ ಬುದ್ಧಿಯಿಲ್ಲ; ಮಾರ್ಮಿಕ ಹೃದಯವಿದೆ. ಸಂಸಾರದ ಸೀಮೆ ಮುಟ್ಟದ ಆ ಸುಕುಮಾರ ಹೃದಯದಲ್ಲಿ ಎಂಥಾ ಕಲ್ಯಾಣ ಗುಣ ತುಂಬಿ ತುಳುಕುತ್ತಿದ್ದೀತು! ಇದನ್ನು ಅಡವಿಯ ಹುಡುಗಿ ಬಲ್ಲಳು ; ಪಟ್ಟಣದ ಪ್ರಭುವಿಗೆ ಅರಿದು.

ಒಮ್ಮೆ ಮರಿಹಾವು ಜುಳುಜುಳು ಹರಿದಾಡುವದನ್ನು ನೋಡ ನೋಡುತ್ತ ಹಿಗ್ಗಿ ಹೆಚ್ಚಾಗಿ ಅಣ್ಣಾ ಬಾರೋ ಇಲ್ಲಿ ನೋಡು ಬಾರೆಂದು ಕರೆದ ಮುದ್ದುಹುಡುಗಿಯೊಬ್ಬಳು ಹೇಳಬಾರದ್ದು ಹೇಳಿ ಹುಚ್ಚಿಯಾದಳು. ಅಣ್ಣ ಬಂದವನೇ ಕಲ್ಲುಹಾಕಿ ಕೊಂದು ಬಿಟ್ಟ. ಬಲಗೈ ಹಿಡಿದರೆ ಎಡಗೈ; ಎಡಗೈ ಹಿಡಿದರೆ ಬಲಗೈ. ಪಾಪ, ಮಗುವೇನು ಮಾಡಬೇಕು! ನಾನಾಗಿ ಕೊಲಿಸಿದಂತಾಯಿತಲ್ಲಾ ಎಂದು ಊಟ ಸವಿಹತ್ತದೆ ದಿನವೆಲ್ಲಾ ಅತ್ತಂಥ ದೃಷ್ಟಾಂತಗಳು ಕಣ್ಣಿಗೆ ಬೀಳುವದನ್ನು ಕಂಡಿಲ್ಲವೇ?! ಸಿದ್ಧರಾಮನ ಅನುತಾಪ ಅಂಥಾದ್ದು. ಅಂತೇ ಅವನು ಮನೆಮಾರು ಬಿಟ್ಟು ಹೋದೇ ಹೋದನು. ಕಮಲದ ಮೊಗ್ಗೆ ಅರಳಿದರೆ ಕೋಮಲ. ತುಸು ಮುಟ್ಟಿದರೆ ಅದು ಮಾಸುವದು ಮಂಕುವದು, ಕಂದುವದು ಕುಂದುವದು, ಬಾಡುವದು ಬಸವಳಿಯುವದು. ಇಂಥ ಅರಳೆದೆಯ ಮಗು ಸಾವಿಗೆ ಕೈಮಾಡಿ ಕರೆದನಲ್ಲಾ! ಇದರ ನೆಲೆ ಬಲ್ಲವನೇ ಬಲ್ಲ!

"ಹೊನ್ನೆ ಹುಳವ ಕಂಡು ನರಿ ತನ್ನ ಬಾಲವ ಹುಣ್ಣು ಮಾಡಿಕೊಂಡರೆ ಹೋಲ ಬಲ್ಲದೆ?" ಹೂವಿನಂಥ ಹೃದಯವಿಲ್ಲದೆ ಸಿದ್ಧರಾಮನಂತೆ ಸೆಡವು ಮಾಡಿದರೆ ಮರಣಕ್ಕೆ ಶರಣು. ಇಂಥ ಮೂರು ಉದಾಹರಣೆಗಳನ್ನು ನಾನು ಬಲ್ಲೆ. ಅಲ್ಲದೆ ಈ ಮರುಳು ನನಗೂ ಹಿಡಿದಿತ್ತು. ನನ್ನ ನಾ ಹೊರಳಿ ನೋಡಿಕೊಂಡಾಗ ಬಿಟ್ಟಿತು. ಇಂದಿನ ಅಣ್ಣಗಳಿಗಾಗಿ ಇಲ್ಲಿ ಇದನ್ನು ಒಡೆದು ಹೇಳಿದೆ. "ಭಕ್ತಿ ರತಿಯ ವಿಕಲತೆಯನೇನು ಬೆಸಗೊಂಬಿರಯ್ಯ। ಕಾಮಿಗೆ ಉಂಟೆ ಲಜ್ಜೆ ನಾಚಿಕೆ। ಕಾಮಿಗೆ ಉಂಟೆ ಮಾನಾಪಮಾನ। ದೇವನಿಗೊಲಿದ ಮರುಳನಿಗೇನು ಬೆಸಗೊಂಬಿರಯ್ಯ॥" ಇಂತೆಂದುದು ಬಸವಣ್ಣನ ವಚನ. ಇತಿ.

ತಾ. ೫-೧೨-೨೯.

— ಮಧುರಚೆನ್ನ.

# ಬರೆದವನ ಬಿನ್ನಹ.

ಕಾಲಧರ್ಮಕ್ಕೆ ತಕ್ಕ ವಿಚಾರಗಳನ್ನು ರೂಢಗನ್ನಡದಲ್ಲಿ ಪ್ರಚಾರಪಡಿಸುವದೇ ನನ್ನ ಮನಸಿನೊಳಗಿನ ಮಾತಾಗಿದೆ. ಹೀಗೆಂದರೆ ಈ ನಾಟಕವನ್ನೋದಿ ಎಲ್ಲರೂ ಆತ್ಮಹತ್ಯಕ್ಕೆ ನಿಲ್ಲುವುದೇ ಭಕ್ತಿರಹಸ್ಯವೆಂದು ನಾನು ತಿಳಿದಿರಬಹುದಾಗಿ ವಾಚಕರು ಭಾವಿಸಬಹುದು. ನಾನು ಸಿದ್ಧರಾಮನ ಶಿಶುಸುಲಭವಾದ ಸರಳಹೃದಯಕ್ಕೆ ಬೆಲೆಯನ್ನಿತ್ತವನು. ಅವನ ವಚನಗಳಲ್ಲಿ ಉಕ್ಕುವ ಶಿಶುಸಾಧ್ಯವಾದ ಸಮತ್ವಕ್ಕೆ ಬೆರಗಾದವನು. ಇಂಥ ಕೂಸಿನ ಭಕ್ತಿ ಕಲ್ಲುಕರಗಿಸುವಂಥಾದ್ದು. ದೇವರಾಯನ ಕರುಳು ಕರಗಲಾರದೇ ಇಂಥ ಭಕ್ತಿಗೆ! ಆಧುನಿಕರಲ್ಲಿ ರಾಮಕೃಷ್ಣಪರಮಹಂಸರೂ, ಸಾಧುಸುಂದರಸಿಂಗರೂ ಈ ಮಗುವಿನ ಹಾದಿಯಲ್ಲಿ ಹೆಜ್ಜೆ ಹಾಕಿದವರು. ಅಯ್ಯೋ! ಅವರ ಹೃದಯವೆಂಥಾದ್ದು! ಮಲಜಲಗಳಲ್ಲಿ ಕೂಡ ಭೇವ ಹೊಳೆಯದ ಮಗುಗಳಂಥವರು! ಆವರಿಗೆ ಆ ದಾರಿ ಸಲ್ಲಿತು. ಭೇಸಬುದ್ಧಿಯ ಮಡುವಿನಲ್ಲಿ ಮುಳುಗಿರುವ ನಾವು ಅವರಂತೆ ಕತ್ತಿಗೆ ಕುತ್ತಿಗೆ ಕೊಟ್ಟರೆ ಸಾವಿನ ಬಾಯಿಗೆ ತುತ್ತೇ ಸರಿ. ನಮಗೆ ಅವರ ಸಾಹಸ ಬೇಡ. ಹೃದಯ ಬೇಕು. ಆತ್ಮಸ್ಥ ಜೀವಭಾವದ ಶಾಂತಿಯೇ ಇಂದಿನವರಿಗೆ ವಿಜ್ಞಾನಸಿದ್ಧಿಯ ದಾರಿಯೆಂದು ಅರವಿಂದ ಯೋಗಿಗಳು ಸಾರುವರಲ್ಲಾ ಅದೇ ನಮ್ಮ ಗುರಿ. ಇದಿರಲಿ; ಸಿದ್ಧರಾಮನಂಥಾ ಸಣ್ಣ ಹುಡುಗರೇನು ಇಂಥ ಸಾಹಸ ಮಾಡಿಯಾವು, ಇದು ಜೊಳ್ಳು ಕತೆಯೆಂದು ಕೆಲವರು ಅನ್ನಬಹುದು. ಆದರೆ ಅವರಿಗೆ ನಾನು ಹೇಳುವದೇನಂದರೆ.—

"ಹತ್ತರಕೆಯ ರೇವಣಸಿದ್ದಪ್ಪನವರು ಚಿಕ್ಕಂದಿನಲ್ಲಿ ಪಾರಾಯಣ ಮಾಡುತ್ತಿದ್ದಂಥ ದೇವೀಸ್ತೋತ್ರದಲ್ಲಿ ಒಂದುದಿನ ಯಾವುದೋ ಒಂದು ಶ್ಲೋಕವು ಮರವಾಗಲು ಎಷ್ಟು ನೆನಪು ಮಾಡಿಕೊಂಡರೂ ನೆನಪಿಗೆ ಬಾರದೆ ಹೋದದ್ದರಿಂದ ಏನೇನೋ ಭಾವಿಸಿಕೊಂಡು ಬಾಪಿಯಲ್ಲಿ ಬಿದ್ದು ಜೀವ ಕಳಕೊಳ್ಳಲಿಕ್ಕೆ ನಿಂತಿದ್ದ

ರಂತೆ! ಆಗ ಯಾರೋ ಒಬ್ಬರು ನೋಡಿ ಬೈದು ಬುದ್ಧಿ ಹೇಳಿ ತಿರುಗಿಸಿದರಂತೆ! ಸಾಲೆಯಲ್ಲಿ ಲೆಕ್ಕ ಬಿಡಿಸುವವಕ್ಕೆ ತನ್ನಿಂದಾಗದೆ ಹೋದ ಮಟ್ಟಿಗೆ ರಾಮತೀರ್ಥರು ಚೂರಿಯ ಬಾಯಿಗೆ ಬಲಿ ಬೀಳು ವವಕ್ಕೆ ನಿಂತಿದ್ದರೆಂಬುದು ಸರ್ವಶ್ರುತ. ಮಹಾತ್ಮಾ ಗಾಂಧಿಯವರು ಚಿಕ್ಕಂದಿನಲ್ಲಿ ಕಳವಿನಿಂದ ತಂಬಾಕು ಸೇದಿದ್ದರಿಂದ ಕೊನೆಗೆ ಪಶ್ಚಾತ್ತಾಪಬಟ್ಟು ಉರುಲು ಹಾಕಿಕೊಳ್ಳಲಿಕ್ಕೆ ಒಂದು ಬೀಳು ದೇಗುಲಕ್ಕೆ ಹೋಗಿದ್ದುದಾಗಿ ತಾವೇ ಸ್ವತಃ ಬರೆದಿದ್ದಾರೆ. ಎಳೆಮಕ್ಕಳ ಬುದ್ಧಿ ಬಲಿಯದ ಹೂವಿನಂಥ ಹೃದಯದಲ್ಲಿ ಸಾಯಬೇಕೆನ್ನುವದೂ ಸನ್ಯಾಸಿಯಾಗಬೇಕೆನ್ನುವದೂ ಅಲ್ಪ ಕಾರಣಕ್ಕಾಗಿ ಕೂಡ ಒಮ್ಮೊಮ್ಮೆ ಕಂಡುಬರುವದನ್ನು ಬಹುಜನರು ಬಲ್ಲರು. ಚಟ್ಟೊಂದು ಮಾತಿಗೆ ಚುಟ್ಟೊಂದು ಮಾತಿಗೆ ವಿವೇಚನವಿಲ್ಲದೆ ಹೆಣ್ಣುಮಕ್ಕಳು ಕೆರೆಬಾವಿಯ ಪಾಲಾಗುವದನ್ನು ಕಂಡಿಲ್ಲವೇ? ಎಳೆಬುದ್ಧಿಯಲ್ಲಿ ಇಂಥ ವಿಚಾರಗಳು ಹೆಚ್ಚು ಮಾಡುವದುಂಟು" ಆದರೂ ಭೇದ ಪ್ರತಿಷ್ಠಿತರಾದ ನಮಗೆ ಇದು ವಿವೇಕವಲ್ಲ.

ಇನ್ನು ಈ ನಾಟಕಕ್ಕೆ ಧನಸಹಾಯ ಮಾಡಿ ಪ್ರೋತ್ಸಾಹಿಸಿ, ಶ್ರೀಸಿದ್ಧೇಶ್ವರ ಗ್ರಂಥಮಾಲೆಯ ಒಂದು ಪುಸ್ತಕವನ್ನು ಮಾಡಿಕೊಂಡ ಮಹನೀಯರ ಹೆಸರುಗಳನ್ನು ಬೇರೆ ಕಡೆಗೆ ನೋಡಿಕೊಳ್ಳಬೇಕು. ಆ ಮಹನೀಯರಿಗೆ ನಾನು ಕೃತಜ್ಞನಾಗಿರುವೆನು. ಶ್ರೀ. ಶಾಬಾದಿ ಗುಂಡಪ್ಪಣ್ಣನವರೂ, ನಮ್ಮ ಸಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ. ಜಮಖಂಡಿ ಸಿದ್ಧರಾಮಪ್ಪನವರೂ, ಹುರುಪುಕೊಟ್ಟು ಬರೆಸಿದ್ದುದರಿಂದ ಇದರ ಶ್ರೇಯಸ್ಸೆಲ್ಲ ಅವರಿಗೇ ಸಲ್ಲತಕ್ಕದ್ದು. ಸುಂದರವಾದ ಮುನ್ನುಡಿ ಬರಕೊಟ್ಟ ಗೆ॥ ಮಧುರಚೆನ್ನನ ಸಹಾಯಕ್ಕೂ ನಾನು ಋಣಿಯಾಗಿರುವೆ. ಅಲ್ಪಾವಧಿಯಲ್ಲಿಯೇ ಅಂದವಾಗಿ ಮುದ್ರಿಸಿಕೊಟ್ಟ ರಾ॥ ಸಾ॥ ಫ. ಗು. ಹಳಕಟ್ಟಿಯವರಿಗೂ ಅಚ್ಚುಕೂಟದ ವ್ಯವಸ್ಥಾಪಕರಾದ ಗೆ॥ ಮಿರ್ಜಿ ಸಂಗಣ್ಣನವರಿಗೂ ಉಪಕೃತನಾಗಿರುವೆನು.

---

— ಓಂನಲ್. —

# ಭಕ್ತಿರಹಸ್ಯ.

ಅಥವಾ

## ಶ್ರೀ ಸಿದ್ಧರಾಮೇಶ್ವರ ನಾಟಕವು.



(ಇಬ್ಬರು ಬಾಲಿಕೆಯರು, ಪರಮಾತ್ಮಸ್ತೋತ್ರವನು ಮಾಡುವರು.)

**ನಾಂದಿ.**

॥ಕಂದ॥ ಶ್ರೀಸುರ ನರವರ ಕಿನ್ನರ।
ಭೂಸುರ ಗಂಧರ್ವ ದಾನವಾದ್ಯರ ವರದಾ ॥
ಸಾಸಿಗ ಭಕ್ತರ ಧೀನಾ।
ಮಾಸದ ಮಗುಗಳನು ಕಾಯೊ ನಗೆಮೊಗದರಸಾ ॥

## ೧ನೇ ಅಂಕು.

### ಪ್ರಥಮ-ಪ್ರವೇಶ.

[ವಿಶ್ವಾಸರಾಯ ಮತ್ತು ವಿನಾಯಕ ಇವರ ಪ್ರವೇಶ.]

ವಿನಾಯಕಃ— ನಮಸ್ಕಾರ ವಿಶ್ವಾಸರಾಯರೇ, ಎತ್ತಿಂದ ಬರೋಣವಾಯ್ತು ಸ್ವಾಮಿ ?

ವಿಶ್ವಾಸರಾಯಃ— ಸ್ನಾನ ತೀರಿಸಿಕೊಂಡು ಗಣಪತಿ ದೇವಾಲಯಕ್ಕೆ ಹೋಗಿ ಬರಲಿಕ್ಕೆ ಇಷ್ಟು ವಿಳಂಬವಾಯ್ತು.

ವಿನಾ:— ಓಹೋಹೋ ಅಂಗೈ ಹುಣ್ಣಿಗೆ ಕನ್ನಡಿ ನೋಡಿ ದಂತಾಯ್ತು, ನನ್ನ ಪ್ರಶ್ನೆ. ಏಕೆಂದರೆ ಎಲ್ಲಾ ಸ್ಪಷ್ಟವಾದ ಚಿಹ್ನಗಳು, ಮಧ್ಯಾಹ್ನದ ಬಿಸಿಲಿನಂತೆ ಗೋಚರವಾಗುತ್ತಿವೆ ಅಲ್ಲವೇ? ಬಿಡಿ. ಈವೊತ್ತು ಸ್ನಾನಕ್ಕೆ ಇಷ್ಟೇಕೆ ತಡವಾಯ್ತು.

ವಿಶ್ವಾಸ:— ಒಂದು ನ್ಯಾಯ ಗಂಟು ಬಿದ್ದಿತ್ತು. ಅದನ್ನು ಬಗೆ ಹರಿಸಿ ಸ್ನಾನ ಮಾಡಿದ್ದು, ಶೈತ್ಯೋಪಚಾರದಂತೆ ಸುಖಕರವಾಯ್ತು. ಎಷ್ಟು ಹೊತ್ತಾದರೂ ದೇವದರ್ಶನ ಮಾಡದೆ, ಸಮಾಧಾನವಾಗು ವದಿಲ್ಲ.

ವಿನಾ:— ಇಂದಿನ ನ್ಯಾಯದಲ್ಲಿ ಎಷ್ಟು ದೊರೆಯಿತು— ಗೋಪಾಳ ಪ್ರಸಾದ?

ವಿಶ್ವಾಸ:— ನ್ಯಾಯದ ಒಂದು ಪಕ್ಷದವನು, ತೀರಾ ನಮ್ಮವ ನಾಗಿದ್ದುದರಿಂದ ಅರವತ್ತೇ ರೂಪಾಯಿಗಳು ಹಸ್ತಗತವಾದವು.

ವಿನಾ:— ತೀರಾ ನಿಮ್ಮವನೆಂದು ಸ್ವಲ್ಪದರ ಮೇಲೇ ಬಗೆಹ ರಿಸಿದಿರಿ ಹಾಗಾದರೆ!

ವಿಶ್ವಾಸ:— ಅಪ್ಪಾ ನಮ್ಮ ಯತ್ನವೇನು ಸೂರ್ಯ-ಪ್ರಕಾಶದಂತೆ ಅಮೂಲ್ಯವಾದುದಲ್ಲ! ಮನೆಯ ಕೆಲಸ ತ್ಯಜಿಸಿ, ಅವರ ಕಾರಭಾರ ಮಾಡಬೇಕಾದರೆ, ಸುಮ್ಮನಾಗುತ್ತದೆಯೋ? ಪ್ರತಿಪಕ್ಷದವರು, ಎಷ್ಟು ಶಪಿಸುತ್ತಾರೆ—ಎಷ್ಟು ಚಿಟುಕಿ ಮುರಿಯುತ್ತಾರೆ. ಅಂಥಾ ಗುಡುಗು ಸಿಡಿಲುಗಳಿಗೂ ಭಯಪಡದೆ, ನಮ್ಮ ನ್ಯಾಯಸಿಂಹದ ಗರ್ಜನೆ ಮಾಡಿ ಸುವುದು ಸಾಮಾನ್ಯವಲ್ಲ. ಅಂಥ ಭಯಂಕರ ಹೋರಾಟಕ್ಕೆ ಪ್ರತಿ ಫಲವು ಬೇಡವೇ?

ವಿನಾ:— ನಿಮಗೆ ಗೋಪಾಳ ಸಲ್ಲಿಸಿದವನು, ಸಂತೋಷದಿಂದಲೇ ಸಲ್ಲಿಸಿರಬಹುದಲ್ಲವೇ?

ವಿಶ್ವಾ:— ಆ ಭ್ರಷ್ಟ ರಂಡೆ ಮಗನು, ಕೈಯಿಂದ ಕಾಸು ಕೊಡ ಬೇಕಾದರೆ ಮೋರೆಗೆ ಸೆರಗು ಹಾಕಿದನು. ಹೆಂಗಸರ ಹೊಯ್ಮಾ

ಲಿತನಕ್ಕೂ, ಇಂಥ ಅಳುಬುರುಕತನಕ್ಕೂ ಯಾರೂ ಮಂಕಾಗಬಾರದು. ಅವನು ಹೊಲ ಬರಕೊಟ್ಟು, ನನ್ನ ಪ್ರತಿಫಲವನ್ನು ಕೊಟ್ಟನು.

ವಿನಾಃ— ಆ ಕಳಕಳಿಕೆಗೆ ನಿಮ್ಮ ಹೃದಯವು ಕರಗಲಿಲ್ಲವೇ?

ವಿಶ್ವಾಃ— ನನ್ನ ಹೃದಯವು ಬರ್ಫದಂತೆ, ಕೈಯೊಳಿದರೆ ಕರಗುವಂಥದು! ಆದರೆ ಕಲ್ಲುಬಂಡೆಗಳಿಗೆ ಹಣಿಯದು. ಆದರೂ ಈ ಹೊತ್ತು ಗಣೇಶನಿಗೆ ಅಭಿಷೇಕ ಮಾಡಿಸಿ, ನೂರೊಂದು ತುಳಸಿ ಪತ್ರಗಳನ್ನು ಸಮರ್ಪಿಸಿರುವೆ. ಏನು ಹೇಳಬೇಕಯ್ಯಾ ನಿನಗೆ? ಸಾವಿರ ದುಷ್ಕೃತ್ಯ ಮಾಡಿದರೂ ಪರಮಾತ್ಮನ ಆಶ್ರಯವು ತಾಯಿಯಂತೆ ರಕ್ಷಿಸುವದೆಂಬುದನ್ನು ಕೇಳಿಲ್ಲವೆ?

ವಿನಾಃ— ಹೌದು, ಧರ್ಮ ಬೇರೆ— ವ್ಯವಹಾರ ಬೇರೆ! ವ್ಯವಹಾರದಲ್ಲಿ ಒಬ್ಬರನ್ನು ಮುಳುಗಿಸುತ್ತೇನೆ. ಒಬ್ಬರ ಆಸ್ತಿ-ಸಂಪತ್ತುಗಳನ್ನು ಅಪಹರಿಸುತ್ತೇವೆ. ಆದರೆ, ಏಕಾದಶಿಯಂಥ ಒಂದು ವ್ರತ ಹಿಡಿದಿದ್ದರೆ ಬ್ರಹ್ಮಾಸ್ತ್ರ ಹಿಡಿದಂತೆ!

ವಿಶ್ವಾಃ— ಹಾಗೆ ಮಾಡಿದರೇ ಪ್ರಪಂಚದ ಹಡಗವು, ದಂಡೆ ಕಾಣುವುದು. ಹಿಂದಕ್ಕೆ ಯಾವನೋ ಬಂದಿದ್ದನಲ್ಲ—ರೇವಣಸಿದ್ಧೇಶ್ವರನಂತೆ! ಹಾಗೆ ಕಾವಿಲಾಟ ತೊಟ್ಟು, ಸೋಗು ಮಾಡುವುದು ಯೋಗ್ಯವಲ್ಲ. ಅಂಥಾ ತ್ಯಾಗಿ-ಯೋಗಿಯೆನಿಸುವವನೇನು, ಪರಗ್ರಹದಲ್ಲಿ ಭೋಜನದ ದಾಳಿಯನ್ನು ತಪ್ಪಿದಿರುವನೇ?

ವಿನಾಃ— ಯಾರು ಕೇಳುತ್ತಾರೆ ಅಂಥವರನ್ನು? ತಿರುಗಿ ಕೇಳಿದರೆ, ಚಂದ್ರಾಮನಿಗಿಂತ ಚಿಕ್ಕೆಗಳೇ ಮಿಗಿಲು! ಆ ಬೊಡ್ಡೆಯ ಮಗ—ಕುಡುವೊಕ್ಕಲಿಗರ ಮುದ್ದುಗೊಂಡನ ಹುಡುಗ—ಅವತಾರಿಕ ಪುರುಷನಂತೆ! ಅಂಥಾ ಹುಂಬ ಒಕ್ಕಲಿಗರಲ್ಲಿ ದೇವರು ಅವತರಿಸುವನೇ? ದೇವರಿಗೆ ನಮ್ಮಂಥ ಸದ್ಬ್ರಾಹ್ಮಣರ ಮನೆಗಳಿಲ್ಲ ಹಾಳಾಗಿವೆಯೋ?

ವಿಶ್ವಾ:— ಅದರ ಗೊಡವೆ ನಮಗೇಕೆ ಬೇಕು? ಅವತಾರ ಮಾಡಿಬಂದವನು, ಏನು ಬೆಳಕು ಕೆಡಹುತ್ತಾನೋ ಕೆಡಹಲಿ.

ವಿನಾ:— ಅಯ್ಯಯ್ಯೋ - ಬೆಳಕು! ಮುಗಿಲ ಬೆಳಕೇ! ಹುಂಬ ರಂಡೇಗಂಡರಿಗೆ 'ಸ್ವರ್ಗ' ಅನ್ನಲಿಕ್ಕೆ ಬರೋದಿಲ್ಲ, ನಮ್ಮ ಮೇಲೆ ಬೆಳಕೇ?

ವಿಶ್ವಾ:— ಇರಲಿ ಬಿಡು. ಈಗ ಇತ್ತಲೇ ನಡೆ, ನಮ್ಮ ಮನೆಯ ಕಡೆಗೆ!

ವಿನಾ:— ಅಯ್ಯೋ ಒಳಿತನ್ನು! ಇಂದು ಶುಕ್ರವಾರ ಗೌರಿ ಪೂಜೆ ಆಗಬೇಕು. ಸಂಜೆಯತನಕ ಊಟವಿಲ್ಲ.

ವಿಶ್ವಾ:— ಫಲಾಹಾರಕ್ಕೆ ದೋಷವಿಲ್ಲವಷ್ಟೇ?

ವಿನಾ:— ಛೇ, ಛೇ, ಅದಕ್ಕೂ ಈಗ ಅವಕಾಶವಿಲ್ಲ.

ವಿಶ್ವಾ:— ಕೈಯೊಳಗಿನದೇನೋ?

ವಿನಾ:— ಏಕೋ ಸ್ವಲ್ಪ ಜಡವಾಗಿದೆ - ಸೊಂಡಾಪ ಪುಡಿ ತಂದಿರುವೆ.

ವಿಶ್ವಾ:— ವಾಹವ್ವಾ— ಫಲಾಹಾರ ಚನ್ನಾಗಿದೆಯಲ್ಲಾ!

(ನಗುತ್ತ ಹೋಗುವರು)

---

## ದ್ವಿತೀಯ-ಪ್ರವೇಶ.

---

( ಮುದ್ದುಗೊಂಡ, ಸುಗ್ಗಲೆಯರು ಮನೆಯಲ್ಲಿ )

ಸುಗ್ಗಲೆ:— ಪ್ರಿಯಾ, ಇಂಥ ಸುಖದ ದಿನಮಾನಗಳು ಬರ ಬಹುದೆಂದು ಕನಸಿನಲ್ಲಿಯೂ ಅನಿಸಿರಲಿಲ್ಲ.

ಮುದ್ದುಗೋಂಡ:— ಚಂದ್ರಗ್ರಹಣವಾದಾಗ ಬೆಳದಿಂಗಳ ಕಲ್ಪನೆ ಬರುವದು ಕಠಿಣ. ವ್ಯೋಮನ ಮೊದಲುಮಾಡಿಕೊಂಡು ಎಲ್ಲಾ ಪರಿವರ್ತನವಾದರೂ ಆಶ್ಚರ್ಯವೇನು ಅಲ್ಲ —

**ಪದ—ಧಾಟಿ— 'ಸುರವರಾ ಸುಮನೋಹರಾ' ಎಂಬಂತೆ**

**ಅರಿದೇನೀಸತ್ ಕಾಲದೊಳ್ ॥**
**ಪೂರೆಗೊಳ್ಳದೇ ॥ಪಲ್ಲ॥**
**ಕವುರಿದ ನೈದಿಲೆ ಚಂದ್ರನ ನಿರುಕಿಸಿ।**
**ಪಿನುಲ ಸುಹಾಸ್ಯದಿ-ನಲಿಯುದೆ ಸಿಜದೆ ॥೧॥**
**ಕಡುಬಡವನು ಕಡವರವನೆಶಹಲು।**
**ಹಿಡಿವುದೇ ಹರುಷವ-ಸ್ಮುಡದಯಾವೊದಗಲು ॥೨॥**

ಸುಗ್ಗ:— ಪ್ರಿಯಾ, ಸಿದ್ಧರಾಮನು ನಮಗೆ ಕಾಮಧೇನು ಇದ್ದಂತೆ ನೋಡಿ!

ಮುದ್ದು:— ಆದೆಲ್ಲಾ ಆ ರೇವಣಸಿದ್ಧೇಶ್ವರ ಸ್ವಾಮಿಗಳ ಆಶೀರ್ವಾದದ ಫಲವಲ್ಲವೇ?

ಸುಗ್ಗ:— ನನ್ನ ಸಿದ್ದಣ್ಣನು ಬಡತನದ ಕತ್ತಲೆಗೆ ಸೂರ್ಯನಾಗಿ ಉದಿಸಿದನು; ನನ್ನ ಸಿದ್ಧನು ಭಕ್ತಿರತಿಗೆ ಕಾಮನಾಗಿ ಬಂದನು. ನನ್ನ ಕಂದಯ್ಯನು ಲಕ್ಷ್ಮೀಪತಿಯಾಗಿ, ನನ್ನಡಿಯಲ್ಲಿ ಬಂದಾಕ್ಷಣವೇ ಲಕ್ಷ್ಮಿಯು ದಾಸಿಯಾಗಿ, ನನ್ನ ಮನೆಯಲ್ಲಿ ಬಿದ್ದಳು. ನನ್ನ ಹಂಸ ಸಂಘ ಮಗನು ಒಂದಿನವಾದರೂ ಹಟಮಾಡಿದನೇ, ಅತ್ತನೇ, ಕರೆದನೇ? ವಿವೇಕದ ಪರ್ವತವೇ ಕೂಸಾಗಿ ಬಂದಿದೆ ನನ್ನ ಮನೆಗೆ.

ಮುದ್ದು:— ಸುಗ್ಗಲೇ, ನೀನಿಷ್ಟು ಸಂತುಷ್ಟಳಾಗಿದ್ದರೂ ನನ್ನ ಮನೋಮೃಗವು ಆ ಪರಮಾತ್ಮಚಂದ್ರನ ಕಡೆಗೇ ಜಿಗಿಯುತ್ತಿದೆ. ಚಿನ್ನ-ರನ್ನಗಳನ್ನು ತುಳಿಯುತ್ತ ನಾನೆತ್ತಲೋ ನಡೆದಿರುವೆ. ಸುಖ-ಶಾಂತಿಗಳ ಸುವಾಸನೆಯನ್ನು ಲೆಕ್ಕಿಸದೆ, ಭ್ರಮರದಂತೆ ನಾನಾವುದೋ ಒಂದು ಹೂವಿಗಾಗಿ ಹೊರಟಿರುವೆ. ಗ್ರಹನಕ್ಷತ್ರಗಳ ಬಳಗದಲ್ಲಿದ್ದ ಚಂದ್ರಮನು, ಕೃಷ್ಣಪಕ್ಷದಲ್ಲಿ ಸೊರಗುತ್ತಿರುವಂತೆ ನನ್ನ ಸ್ಥಿತಿಯಾಗಿದೆ.

**ಪದ—ಧಾಟಿ—'ಕೊಡುವುದು ನಯನಕೆ' ಎಂಬಂತೆ**

**ಎಳೆವುದು ಇಳೆಯಾಣ್ಮನ ಪದಕೆ ॥ಪ॥**
**ಮರವಿನಿಂದ ಮೈಮರೆತ ಭ್ರಮರವು ।**
**ವರರವಿಯುದಯದೆ ತೆರೆಯಲು ಕಮಲವು ॥**
**ಇರದೆ ತಾನು ವರಕುಸುಮವ ನರಸಲ್ ।**
**ಭರದಿಂದಲಿ ಸಂಚರಿಸುವ ಬಗೆಯೊಳ್ ॥೧॥**

ಸುಗ್ಗಿ:— ಸರಿ. ನನ್ನ ಸ್ಥಿತಿಯನ್ನಿಷ್ಟು ಕೇಳಿ.— ನನಗೆ ಸಂಸಾರದ ಭೂತವೇ ಬಡಿದಿದೆಯೆಂದು ಕೊಳ್ಳಿ ಬೇಕಾದರೆ! ನನ್ನ ಸಿದ್ಧನ ರೂಪ-ತೇಜಸ್ಸು-ಗುಣ-ಭಾಷಣ ಕಂಡು-ಕೇಳಿದರೆ, ಮತ್ತೊಬ್ಬ ದೇವರಿದ್ದಾನೆಂದು ನನಗಂತೂ ಅನಿಸುವದಿಲ್ಲ. ಇದಕ್ಕಿಂತ ಹೆಚ್ಚಿನ ಸಂಪತ್ತು ಆ ಕಾಣದ ದೇವರಿಗೆಲ್ಲಿಂದ ಬರಬೇಕು?

(ತೆರೆಯಲ್ಲಿ) ಅಪ್ಪಾ – ಅಪ್ಪಾ.

ಮುದ್ದು:— (ಕೇಳಿ) ಹುಡುಗ ಬಂದನೇನೋ ನೋಡು. (ಸಿದ್ಧರಾಮನ ಪ್ರವೇಶ)

ಸುಗ್ಗಿ:— (ನೋಡಿ) ಬಾ ಮಗೂ, ಉಣ್ಣುತ್ತೀಯಾ? (ಅಪ್ಪಿ) ನಡೆ ಒಳಗೆ, ಬರಲಿಕ್ಕೆ ಎಷ್ಟು ಹೊತ್ತಪ್ಪಾ? ನಿನ್ನನ್ನು ಹುಡುಕಾಡಿ ಬೇಸತ್ತೆ ನೋಡು.

ಸಿದ್ಧ:— ಅಪ್ಪಾ, ನನ್ನನ್ನು ಬಹಳ ಹುಡುಕಾಡಿದೆಯಾ? ಹಾಗಾದರೆ ನಿನ್ನ ಕಾಲುಗಳು ನೋಯುತ್ತಿದ್ದಾವು. ಕೊಂಚ ಒತ್ತುತ್ತೇನೆ, ಕುಳ್ಳಿರು. (ಹಾಗೆ ಮಾಡಹೋಗುವನು.)

ಸುಗ್ಗಿ:— ಬೇಡಪ್ಪಾ— ನನ್ನಂಥ ಬಿರುಸು ಕಟ್ಟಿಗೆಗೆ, ನಿನ್ನ ಹೂವಿನಂಥ ಕೈ ಮುಟ್ಟಿಸುವಿಯಾ? (ಕೈ ಮುದ್ದಿಡುತ್ತ) ನನ್ನ ಮುಗುಳಿಗೆ ಧೂಳು ಸೋಂಕಿದೆ; ನನ್ನ ಬಂಗಾರದ ಎಲೆಗಳು ಬಿಸಿಲಿಗೆ ಬಾಡಿವೆ, ಒಳಗೆ ನಡೆ, ತೊಳೆಯುತ್ತೇನೆ.

ಮುದ್ದು:— ನಿಲ್ಲೀ ಕೊಂಚ. ನನ್ನಯ್ಯನ ಪಾದದ ಧೂಳು ಜಾಡಿಸುತ್ತೇನೆ. (ಜಾಡಿಸುತ್ತ) ನನ್ನ ಸಿದ್ಧವೀರನು, ದಿಗ್ವಿಜಯಮಾಡಿ

ಬಂದರೆ ನಮಗೆ ಹಿಗ್ಗು! ಸಿದ್ಧೇಶಾ, ಯಾವ ಋಷಿಯ ಆಶ್ರಮಕ್ಕೆ ಹೋಗಿ ಪಾದಪೂಜೆ ಮಾಡಿಸಿಕೊಂಡು ಬಂದೆಯಪ್ಪಾ? ನೀನು ಇಲ್ಲಿಂದರೂ ಪಾದಗಳಿಗೆ ಭಸ್ಮಲೇಪವಾಗಿದೆಯಲ್ಲ!

ಸಿದ್ಧ:—ಅಪ್ಪಾ—ಗಿಳಿಮರಿಯೊಂದು—ಗಿಡಗನ ಬಾಯಲ್ಲಿ ಸಿಕ್ಕಿ ಗಾಯ ಹೊಂದಿತ್ತು. ಅದಕ್ಕೆ ನೀರು - ಹಣ್ಣು ಹಾಕಿ, ಅದರ ತಾಯಿಯ ಬಳಿ ಬಿಟ್ಟು ಬಂದೆವು. ಅಪ್ಪಾ - ಮರಿಗೆ ಮಾತಾಡಲಿಕ್ಕೆ ಬರುತ್ತಿದ್ದಿಲ್ಲ ವಾದರೂ, ಬಿಕ್ಕಬಿಕ್ಕಿಗೆ 'ಅಪ್ಪ- ಅಪ್ಪಾ, ಅನ್ನುತ್ತಿತ್ತು ನೋಡೇ?

ಸುಗ್ಗಿ:— ನಿನಗೆ ಅಂಥ ಪ್ರಾಣಿಗಳ ಮೇಲೆ ಪ್ರೀತಿ ಬಹಳ!

ಮುದ್ದು:— ಕೃಷ್ಣನು ಗೋಪಿಕಾ ಸ್ತ್ರೀಯರನ್ನು ಸಂತೈಸಲಿಕ್ಕೆ ಹೋದಂತೆ, ಹೋಗಿದ್ದಿಯಾ?

ಸಿದ್ಧ:— ಅಪ್ಪಾ - ನಾನು ಗೋಪಾಲನಾಗಬೇಕೆನುವೆ; ಏಕೆಂದರೆ ಕರುಗಳು ನನ್ನ ಕಂಡರೆ ಬಾಲನೆತ್ತಿ, ಗೋಣುತಂದು ತೊಡೆಗೆ ಹೊಂದಿಸಿ ನಿಲ್ಲುತ್ತವೆ! ಗಳಿಗೆ ತುರಿಸಿದಾಗಲೇ ನನಗೆ ಸಮಾಧಾನವಾಗುತ್ತೆ. ಅಪ್ಪ- ಆಕಳು ತನ್ನ ಕರುವನ್ನು ಅಕ್ಕರೆಯಿಂದ ನೆಕ್ಕುವಂತೆ, ಕರುಗಳು ನನ್ನ ಕೈ ನೆಕ್ಕಲಿಕ್ಕೆ ಹಾತೊರೆಯುತ್ತವೆ. ಏನು ಆಶ್ಚರ್ಯ ನೋಡೇ? ಮೂಕಪ್ರಾಣಿ ಪಶುವಿಗೂ ಅಷ್ಟು ಮಮತೆ! ತನ್ನವರೆಂಬುವ ಭಾವನೆಯು ಪ್ರಾಣಿಗಳೆಲ್ಲರಿಗೂ ಇರುವಂತೆ ತೋರುತ್ತದೆ.

ಮುದ್ದು:—ತಮ್ಮಾ, ನಿನ್ನನ್ನೇ ಏಕೆ ಪ್ರೀತಿಸುತ್ತವೆ ಬಲ್ಲೆಯಾ? ನೀನು ಉಣ್ಣುವಾಗ- ತಿನ್ನುವಾಗ ಆ ಕರುಗಳಿಗೆ ಅರ್ಧಪಾಲು ಇದ್ದೇ ಇರುತ್ತದೆ; ಅಂದಮೇಲೆ ಅವೇಕೆ ನಿನ್ನನ್ನು ನಂಬಲಿಕ್ಕಿಲ್ಲ?

ಸುಗ್ಗಿ:— ಸಿದ್ಧಣ್ಣಾ- ಸೂರ್ಯನಿದ್ದಲ್ಲಿ ಕತ್ತಲೆಯು ಕಾಣದಿರುವಂತೆ, ಮತ್ಸರ ದುರ್ವಿಚಾರಗಳು, ನೀನೆದುರಿಗಿರುವಾಗ ಕರಗಿ ಬಿಡುತ್ತವೆ: ಅಂದ ಬಳಿಕ, ನಿನ್ನ ಜತೆಗಿದ್ದವರು ನಿನ್ನಂತೆ ನಿರ್ಮಲರೇ ಆಗಬೇಕು? ಗಂಗೆಯಲ್ಲಿ ಮೈ ತೊಳಕೊಂಡರೆ, ಆಕೆಯಂತೆ ನಿರ್ಮಲರಾಗೋದಿಲ್ಲವೇ?

ಸಿದ್ಧ:— ಅವ್ವಾ, ಅಂಥ ಸಾತ್ವಿಕ ಸ್ವಭಾವದ ಆಕಳುಗಳೊಡನೆ, ಹಗಲುರಾತ್ರಿ ಇದ್ದರೂ ನನಗೆ ಬೇಸರಿಲ್ಲ ನೋಡೇ; ಊಟ ಬಿಡುವೆ; ನಿದ್ದೆ ಮರೆಯುವೆ; ಆಟ-ಪಾಟ ತೊರೆಯುವೆ! ಅವ್ವಾ-ಆಕಳುಗಳೊಡನೆ ಹಚ್ಚಹಸ್ರು ಹಸುರು ಹುಲ್ಲಲ್ಲಿ ಸಂಚರಿಸುವ ಸೌಭಾಗ್ಯವು ನನಗೆಂದಾದರೂ ಬರಬಹುದೇ? ಹಕ್ಕಿಪಕ್ಕಿಗಳ ಹಾಡಿನೊಡನೆ ನಾನೂ ಹಾಡುವ ಸಮಯವು ಎಂದು ಒದಗೀತು?

ಮುದ್ದು:— ಹುಚ್ಚಪ್ಪಾ- ಅಡವಿಯ ಮುಳ್ಳುಕಲ್ಲುಗಳಲ್ಲಿ ದನಗಳೊಡನೆ ತಿರುಗಾಡುವುದು ಸುಖವೇನು? ಉರಿಯಂಥ ಬಿಸಿಲು-ಮಳೆ ಪ್ರವಾಸ್ಹಾರಿಸುವಂಥ ಗಾಳಿ ನಿನಗೆ ತಾಳಲಾಗುವದಿಲ್ಲ. ಇಲ್ಲೇ ಮನೆಯಲ್ಲೇ ತಿನ್ನಲಿಕ್ಕೆ ಬೇಡು, ಆಡಲಿಕ್ಕೇನು ಬೇಕು ಹೇಳು.

ಸಿದ್ಧ:— ಗೋಮಾತೆಯೊಡನೆ ಅಡವಿಯಲ್ಲಿ ಆಡಬೇಕನ್ನುವೆ; ಆಕಳುಗಳು ಮೆಯ್ಯುತ್ತಿರುವಾಗ ನಾನೂ ಉಂಡು, ಜುಳು ಜುಳು ಹರಿಯುವ ನೀರು ಕುಡಿದರೆ ಸಾಕು. ಹೆಚ್ಚಿನ ಯಾವ ಅಂತಸ್ತೂ ಬೇಕಿಲ್ಲ.

ಮುಗ್ಧ:— ನನ್ನಯ್ಯಾ, ನೀನು ಅಡವಿಗೆ-ಬಿಸಿಲಲ್ಲಿ-ದನಗಳೊಡನೆ ಹೋಗುವುದೇ? ನಾನೊಲ್ಲೆ-ನನ್ನ ಕೈಯಿಂದ ಸತ್ತರೂ ಕಳಿಸುವುದಾಗದು.

**ಪದ—ಧಾಟಿ—'ಹಜರತ ಸಲಾಮ' ಎಂಬಂತೆ**

**ಗಮಿಪುದು ಕಾನನಕೆನಿತೋ ।**
**ಸುಮಸಮಕಾಯಾ, ಸೈಸುವುದೆನಿತೋ ॥ಪ॥**
**ನಳನಳಿಸುವವೊಗ-ಚಂದಿರ ಕಂದನೆ ।**
**ಅಳಿಯನು ಅಲರಿಂದಗಲಿಪುದೆನಿತೋ ॥೧॥**

ಸಿದ್ಧ:— ಅವ್ವಾ, ನೀನೇನಾದರೂ ಹೇಳುವಿ! ನನಗಿಂತ ಚಿಕ್ಕ ಮಕ್ಕಳು ಅಡವಿಯಲ್ಲಿ ದನಕಾಯುವದಿಲ್ಲವೇ? ಕೋಮಲ ಕಾಯರಾದ ಎಷ್ಟೋ ಅಕ್ಕಂದಿರು, ಅಡವಿಯ ಬಿಸಿಲಲ್ಲೇ ಕೆಲಸ ಮಾಡಿ ಹಾಡುತ್ತ-ಕಳೆಯುತ್ತ ಬರುವದಿಲ್ಲವೇ? ನಾನೊಬ್ಬ ಶ್ರೀಮಂತರ

ಮಗನೆಂದು, ಅರಗಿಳಿಯಂತೆ ಪಂಜರದಲ್ಲೇ ಇರಿಸಬೇಕೆನ್ನುವಿಯಾ? ದನಗಾಹಿಗಳ ತಾಯ್ತಂದೆಗಳು ರಂಬಿಸಿ, ಪ್ರೀತಿಸಿ ಹೊಲಕ್ಕೆ ಕಳಿಸು ವದಿಲ್ಲವೇ ಅವರನ್ನು? ನೀನೇಕೆ ನನಗಾತಂಕ ಪಡಿಸುವೆ?

ಸುಗ್ಗ:-- ಲಕ್ಷ್ಮೀಪತಿಯಾದ ನಿನಗೇಕಪ್ಪಾ ಅಂಥ ವನವಾಸ?

ಸಿದ್ಧ:-- ಅಪ್ಪಾ, ವನವಾಸವೆಂದರೇನು? ಅದು ಶ್ರೀಮಂತಿ ಕೆಯ ಬಂಧನದಂತೆ ದುಃಖಕರವಲ್ಲ. ರಾಮ-ಸೀತೆಯರ ವನವಾಸ ವಾಗಲಿ, ಪಾಂಡವರ ಅರಣ್ಯವಾಸವಾಗಲಿ ಅದದ್ದು, ಅವರ ಸೌಭಾ ಗ್ಯವೇ ಅನ್ನುವೆ. ಅರಣ್ಯವು ದೇವರಮನೆ ಇದ್ದಂತೆ! ಆ ದೇವನು ನನ್ನಂತೆ ಬಾಲಕನಾಗಿ ಆಡಿದ ಬೆಟ್ಟಕಂದರಗಳು ಎಷ್ಟು ಚಂದ? ಆ ದೇವನು, ಹಾಡುವ ಗಾಳಿಕೊಳಲಿನ ದನಿಯು ಅಲ್ಲಿ ನಿಚ್ಚಳವಾಗಿ ಕೇಳಿಸುತ್ತವೆ. ತರಗೆಲೆಗಳು ತಾಳು ಬಾರಿಸುತ್ತಿರುತ್ತವೆ; ಹೊಳೆ-ಹಳ್ಳ ಗಳು ನರ್ತಿಸುತ್ತವೆ. ಇಷ್ಟೆಲ್ಲಾ ಸಿಂಗಾರವನ್ನು ಪಚ್ಚರತ್ನದಂಥ ಹುಲ್ಲಿನ ಹಾಸಿಗೆಯ ಮೇಲೆ ಕುಳಿತು, ನೋಡಹತ್ತಿದರೆ ಅದೆಷ್ಟು ಸೊಗಸು; ಅದೆಷ್ಟು ಆನಂದ?

ಮುದ್ದು:-- ಸಿದ್ದಣ್ಣಾ, ಊರಲ್ಲಿರುಯುವವರಿಗೆ ಅಡವಿಯು ಸೊಗಸೆನಿಸುವುದು ಸಹಜ; ಆದರೆ ಅಡವಿಯಲ್ಲಿ ಹೋದ ಬಳಿಕ ಅದರ ಸವಿಸುಖಗಳು ತಿಳಿಯುತ್ತವೆ. ಅಂಥ ಸೂರ್ಯನ ವೈಭವವು ಕೂಡ ಹೇಗೆ ಕಷ್ಟಕರವಾಗಿದೆ ಬಲ್ಲಿಯಾ? ಒಂಟಿಗಾಲಿಯ ರಥ, ಹೆಳವ ಸಾರಥಿ!!

ಸಿದ್ಧ:-- ಅಪ್ಪಾ, ಅಡವಿಯು ನನಗೆ ಕಷ್ಟಕರವೆನಿಸಿದರೆ ನಾನೇ ಬಿಡುವೆನಲ್ಲ! ಈಗ ನನಗೆ ಅಪ್ಪಣೆಯೇಕೆ ಕೊಡಬಾರದು?

ಸುಗ್ಗ:-- ನಾಥ, ಸಿದ್ದಣ್ಣನ ಆತುರತೆಯನ್ನು ಭಂಗಪಡಿಸ ಬೇಡಿ; ಅಡವಿಯಲ್ಲಿ ಅವನಿಗೆ ಆನಂದವೆನಿಸುತ್ತಿದ್ದರೆ ಹೋಗಲಿ ಬಿಡಿ. ಸಿದ್ದೂ, ನಿನಗೆ ಅಪ್ಪಣೆಕೊಡಿಸುತ್ತೇನೆ; ಚಿಂತಿಸಬೇಡ.

ಮುದ್ದು:-- ಆದರೆ ದನಗಳ ಜಂಜಾಟವನ್ನು ಕಟ್ಟಿಕೊಳ್ಳಬೇಡ

ಸಿದ್ಧಃ— ತಂದೆ, ದೇವರಮನೆಗೆ ಆಡಲಿಕ್ಕೆ ಹೋಗುವ ನಾನೂ, ಆಟಿಗೆಯನ್ನು ಒಯ್ಯಬೇಕಾಗುತ್ತದೆ. ಆಕಳುಗಳೇ ನನ್ನ ಆಟಿಗೆಗಳು. ದಯವಿಟ್ಟು ನನಗೆ ಅಪ್ಪಣೆಕೊಡಿ; ನನ್ನ ಗೋಮಾತೆಯನ್ನು ಹೊಟ್ಟೆ ತುಂಬ ಮೇಸಿಕೊಂಡು ಬರುವೆ.

ಸುಗ್ಗಃ— ಹೋಗುವಿಯಂತೆ ಮೊದಲು ಉಣ್ಣ ಬಾ; ಸಿದ್ಧ ಪುರುಷಾ, ನಿನಗೆ ಹಸಿವೆನೀರಡಿಕೆಗಳೇ ಇಲ್ಲವೇ? "ನನಗೆ ಉಣ್ಣಿಸು, ತಿನ್ನಲ್ಕಿಕ್ಕೆ ಕೊಡು" ಎಂದು ಅನ್ನಬಾರದೇ ಕಂದಾ? ನನ್ನ ಹೊಟ್ಟೆಯಿಂದ ಹುಟ್ಟಿದ ನೆಪವೇ ಹೊರತು, ಮೊಲೆಕುಡಿಯಲಿಲ್ಲ;— ಹೊಯ್ಹಾಲು ಬೇಡಲಿಲ್ಲ!

ಸಿದ್ಧಃ— ಅವ್ವಾ ಹೊಲಕ್ಕೆ ದಿನಾಲು ಕಳಿಸುವದಾದರೆ, ನಾನು ದಿನಾಲು ಬಹಳಷ್ಟು ಊಟಮಾಡುವೆ; ಆಯ್ತೇ?

ಮುದ್ದುಃ—ಹೋಗಪ್ಪಾ, ಆಕಳು ಕಾಯಲಿಕ್ಕೆ ದಿನಾಲು ಹೋಗು ನಮ್ಮದೇನು ಹೋಗುವುದು?

ಸುಗ್ಗಃ— ನಿನ್ನ ಮನಸ್ಸಿನ ಗರುಡನ ಮೇಲೆ ಕುಳಿತು, ಬೇಕಾದಲ್ಲಿ ವಿಹರಿಸು ಗರುಡವಾಹನಾ! ನಿನ್ನ ಮನೋವೃಷಭನ ಮೇಲೇರಿ, ಸುರಲೋಕವನ್ನೆಲ್ಲಾ ಸಂಚರಿಸು ಮಹಾದೇವಾ!!

ಸಿದ್ಧಃ— (ಹಿಗ್ಗಿ) ಅವ್ವಾ— ನನ್ನ ಗೋಮಾತೆಗಳೊಡನೆ ದೇವರ ಮನೆಗೆ ಆಡಲಿಕ್ಕೆ ಹೋಗುವುದೇ!?

**ಪದ—ಧಾಟಿ—'ಸರ್ವೋದವೆನಿತು ಅನುಮಾ'**

**ಮನಕಾಯಿತೆನಿತು ಹರುಷಾ ॥ಪ॥**
**ವಿಹರಿಸುವೆನು ಘನವನದಲಿ ಮುದದೀ।**
**ಅಹ್ಹ! ಹಸುರುಹಿರಿಹಾಸನು ಸುಖದೀ।**
**ಭೋಗಿಸುವೆನು, ಸುಖವನವಾಸಾ ॥೧॥**

(ಹೋಗುವನು.)

# ತೃತೀಯ-ಪ್ರವೇಶ.

(ಭೀಮ, ಸೋಮ, ಹನುಮಾದಿಗಳು ಅರಣ್ಯದಲ್ಲಿ)

ಭೀಮಃ — ಸೋಮ್ಯಾ ನಮ್ಮ ಹುಂಡಾಕಳು ಒಲು ಹುಂಡು ನೋಡೋ.

ಸೋಮಃ— ನೀನೇನು ಹೇಳಿದಂತಾಯ್ತೋ? ನಮ್ಮ ಹಣಮ್ಯಾ ಒಲು ಮಂಗ ಅಂದರೆ ಏನು?

ಹನುಮಃ— ಯಾಕೆಲೇ, ಕಾಲ್ಕೆದರಿ ಜಗಳ ತೆಗೆಯುತ್ತೀರಿ? ನಮ್ಮ ಸಿದ್ದಪ್ಪನ ಮೋರೆ ನೋಡಿ, ನಿಮಗೆ ನಡಿಲು ಬಿಟ್ಟರೆ, ನೆತ್ತೀಮೇಲೆ ಮೆಣಸು ಅರೆಯಲಿಕ್ಕೆ ಬರ್ತೀರಾ? ಇದು ನೋಡಿರಿ, ಹೇಗಿದೆ-ಬೂದ ಬಡಿಗೆ?

ಭೀಮಃ — ನೋಡಪ್ಪಾ ಹನುಮನ ಮಂಗಾಟ? ಅಂದವ ಯಾರು? ಅನ್ನಿಸಿಕೊಂಡವ ಯಾರು?

ಹನುಃ — ಅವನ್ನೇನು ಸುಡುತ್ತೀ ಬಿಡೋ, ನಮ್ಮ ಸಿದ್ಧರಾಮ ಯಾಕೆ ಬಂದಿಲ್ಲ ಇನ್ನೂ! (ಕಿವಿಗೊಟ್ಟು ಕೇಳಿ) ಬಂದ ಕಾಣುತ್ತದೆ.

ಸೋಮಃ— ಹೌದು. ಏನೋ 'ಸರಸರ' ಎಂದು ಸಪ್ಪಳವಾಗುತ್ತಿದೆ.

ಹನುಃ— ಬಲು ಕಿವಿ ಬಿಡು ನಿನ್ನವ್ವ; ಇತ್ತಿತ್ತ ಬಾ, ಅವನ್ನು ಕಿತ್ತಿ ಒಗೆಯುತ್ತೇನೆ.

ಸೋಮಃ — ಆಗಲಿ, ಯಾರು ಕಿತ್ತುತ್ತಾರೆ ನೋಡೋಣ. (ಕೈ ಕೈ ಹತ್ತುವದು.)

ಭೀಮಃ — ಎಲೋ, ಇತ್ತ ನೋಡಿರೋ ಗಂಡು ನವಿಲು! (ನವಿಲಿಗೆ) ನಿಲ್ಲು ನಿಲ್ಲು! ಸರಸತಿ ಆಣೆ! ನಿನಗೆ ಸರಸತೆಮ್ಮನ ಆಣೆ!! ನೋಡೆಲೇ ಹನುಮ್ಯಾ ನಿಂತಿತು!!

ಹನು:— ಎಲೇ ನವಿಲು-ಹಾವುಗಳ ಜಗಳ! ಮನೆಯ ಜಗಳವನ್ನು ಬಿಟ್ಟು, ಮಂದಿಯ ಜಗಳ ನೋಡುವುದೇಕೆ? ಬಾರೆಲೇ ಸೋಮ್ಯಾ ನಾವೂ ಗುದ್ದಾಡೋಣ ಬಾ. (ಉದ್ಯುಕ್ತನಾಗುವನು.)

ಸೋಮು:-ಎಲೋ ಹುಂಬಾ, ಇತ್ತ ನೋಡು ಸಿದ್ಧರಾಮ ಬಂದ.

ಹನು:— ಏನಪ್ಪಾ ಸಿದ್ಧರಾಮ, ನಿನ್ನನೆಷ್ಟು ಹುಡುಕಬೇಕೋ ಮನೆಮಾಡಿ?

ಸಿದ್ಧ:— ಹನುಮನಿಗೆ ಹುಡುಕುವ ರೂಢಿಯೋ ಅದೆ ಅಲ್ಲವೇ?

ಭೀಮ:— ಸಿದ್ದಣ್ಣಾ, ನಿನ್ನ ಕಾಲ್ಗುಣವೆಂಥದೋ? ನವಿಲು-ಹಾವುಗಳು ಜಗಳಾಡುವವನ್ನು ಬಿಟ್ಟುಬಿಟ್ಟವಲ್ಲ ನೀ ಬಂದಕೂಡಲೇ!

ಸೋಮು:— ಅಷ್ಟು ದೂರವೇಕೆ? ನಮ್ಮ ಗುದ್ದಾಟವೇ ನೆಸೆಗುದಿಗೆ ಬಿದ್ದಿತಲ್ಲ! ಬೆಂಕಿಯಲ್ಲಿ ನೀರು ಸುರುವಿದಂತಾಯ್ತು.

ಸಿದ್ಧ:— ಗೆಳೆಯರೇ, ಅತ್ತನೋಡಿ ನವಿಲಿನ ನರ್ತನವನ್ನು! ಈ ನರ್ತನವು ಅಪ್ಸರೆಯರಿಗೂ ಸಾಧ್ಯವಿಲ್ಲ.

ಭೀಮ:— ಅಪ್ಸರೆಯರು ಒಂದು ವೇಳೆ ಕುಣಿದರೂ ಅಣಕಿಸಿದಂತಾಗುತ್ತದೆ.

ಸೋ:— ನವಿಲುಗರಿಯಂಥ ಸೀರೆಯ ಸೆರಗೆಲ್ಲಿರುತ್ತವೆ ಅವರಿಗೆ?

ಹನು:— ತೆಗೆಯಿರೋ ಎಲ್ಲಿಯ ಅಪ್ಸರೆಯರು? ಕಂಡಿಲ್ಲ-ಕೇಳಿಲ್ಲ. ನಮ್ಮೂರ ಬಸಣ್ಣನು ರಾಧಾನಾಟದಲ್ಲಿ ಕುಣಿಯಹತ್ತಿದರೆ, ಅಟ್ಟವು ಮುರಿಯಬೇಕು. ಅಂಥಾ ಕಾಲಕಸುವು, ಈ ಸೊಟ್ಟಕಾಲಿನ ನವಿಲಿಗೆಲ್ಲಿಂದ ಬರುವದು? (ನಗುವರು.)

ಸಿದ್ಧ:— ನವಿಲಿನ ತುರಾಯಿಯ ಚೆಲುವು, ಅರಸರ ರತ್ನಕಿರೀಟದ ತುರಾಯಿಗೂ ಇರುವದಿಲ್ಲ ತಿಳಿಯಿತೇ?

ಹನು:— ಸರಸತಿಮ್ಮನೂ ಬಲು ಜಾಣ ಹುಡಿಗೆ ನೋಡು. ನವಿಲನ್ನು ಹೇಗೆ ಈಲು ಮಾಡಿಕೊಂಡಿದ್ದಾಳೆ! ಆಕೆಯನ್ನು ಹೊರು

ವುದೂ ನವಿಲೇ! ಪ್ರಸಂಗಬಂದರೆ, ಗರಿಬಿಚ್ಚಿ ಆಪ್ತಾಗಿರಿ ಮಾಡಿ ಹಿಡಿಯುವುದೂ ನವಿಲೇ!!

ಸೋಮುಃ— ಸಿದ್ದ್ಯಾ ಈ ಬಾಯ್ಬಡಕನ ಬಣ್ಣದ ಮಾತು ಕೇಳುತ್ತ ನಿಂತರೆ, ನಮ್ಮ ದನ ಕೈಬಿಟ್ಟಾವು!

ಹನುಃ— ಒಳ್ಳೆಯದೇ ಆಗುವದಲ್ಲಾ! ಪೀಡೆಯಾದರೂ ತಪ್ಪಲಿ.

ಭೀಮುಃ—ಮನೆಯಲ್ಲಿ ಕಪಾಳಕಾಯಿಯನ್ನು ತಿನ್ನಕೊಡುವರು, ಅದು ಹಿತವೇ! ಹುಚ್ಚಪ್ಪಾ, ದನಕಾಯೋದು ತಪ್ಪಿದರೆ, ಸಿದ್ದರಾಮನೊಡನೆ ಆಡುವ ಪ್ರಸಂಗವೇ ತಪ್ಪುತ್ತದೆ. ಅದನ್ನು ಮರೆತಿಯೇನು?

ಸೋಮುಃ—ಅಂಥಾ ಪ್ರಸಂಗವೇತಕ್ಕೆ ಬರುತ್ತದೆ? ನಮ್ಮ ಸಿದ್ಧರಾಮನ ಪುಣ್ಯದಿಂದ ನಮ್ಮ ದನಗಳು ಕಳೆಯುವದೇ ಇಲ್ಲ: ನೋಡುವದಿಲ್ಲವೇ ದಿನಾಲು? ತಾವೇ ಮೇದು ತಾವೇ ನಮ್ಮನ್ನು ಹುಡುಕುತ್ತ ಬರುತ್ತವೆ.

ಸಿದ್ಧಃ— ಗೆಳೆಯರೇ, ಈ ಸೃಷ್ಟಿಯು ಎಷ್ಟು ಮನೋಹರವಾಗಿದೆ ನೋಡಿರಿ! ಕಣ್ಣಿನೊಡನೆ ಹಸುರು ಬಣ್ಣವು ತಿಳ್ಳಿಯಾಟ ಆಡುತ್ತದೆ. ಅಗೋ ಆ ದೂರದ ಮರವು ಕುಳಿತ ಬಸವಣ್ಣನಂತೆ ಕಾಣಿಸುತ್ತದೆ! ಆ ಕೆರೆಯು ಎವೆದೆರೆದ ಅರುಳುಗಣ್ಣಿನಂತೆ ಕಾಣುತ್ತದೆ. ದಂಡೆಯ ಗಿಡಗಳನ್ನು ಮುಂದಕ್ಕೆ ಸರಿಸಬೇಕೆಂದು ತೆರೆಗಳು ಒಂದರ ಹಿಂದೊಂದು, ಬಂದು ಬಡಿಯುತ್ತವೆ! ಅಹ್ಹಾ! ಅದೆಷ್ಟು ಮನೋಹರವಾಗಿ ಕಾಣುತ್ತದೆ. ಅದನ್ನೇ ಬೇಸರಾಗುವ ತನಕ ನೋಡುತ್ತ ನಿಲ್ಲುತ್ತೇನೆ.

**ಪದ—ಧಾಟಿ—ಕರುಣದಿ ಪೊರೆಯೈ ಅಗ್ನಿದೇವಾ ಎಂಬಂತೆ**

**ಮನಗೊಳಿಸುತಿಹ ಬಗೆಯದೆನಿತೋ ॥ ಪ ॥**
**ತನುಶಾಂತಿಯನು ತಾಳುವುದನತೋ ॥ ಅ. ಪ ॥**
**ನಿರುಪಮಲತನನನು, ಸಲಿಸಿತು ಹೃದಯಕೆ।**

**ಪರಿಕಿಸೆ ಮುಕುರವು ದೇವನನಿಲಯುಕೆ॥**
**ಅರಿದರಿದೆನಿಸುವ ತೊಡವಿದು ವನಕೆ।**
**ಪರಿತೋಷದಕಣಿ ॥ ೧ ॥** ( ಮುಗ್ಧನಾಗಿ ನಿಲ್ಲುವನು. )

ಹನುಃ— ನಿಂತರಲ್ಲ ನಿರಂಜನ ಮೂರ್ತಿಗಳು! ' ರೇವಣಸಿದ್ಧೇಶ್ವರಂ ಪ್ರಭೋ ಶಿವ ಹರಹರಹರ ' ಸಿದ್ದಣ್ಣಾ, ನೀನೂ ಒಲು ಹುಚ್ಚ ನೋಡು. ಕರಿವೋರೆಯದಕ್ಕೆ ಮರುಳಾಗಿ ಎಷ್ಟು ನೋಡುತ್ತ ನಿಂತಿರುವಿ! ಈ ಕೆಲಸ ನಮ್ಮಂಥ ಕಗ್ಗಗಳು ಮಾಡಿದರೆ ಚಂದ.

ಸಿದ್ಧಃ—ಗೆಳೆಯಾ, ನೋಡು, ನನ್ನಂತೆ ನೋಡು. ಅಂದರೆ ಅದರ ಮರ್ಮವು ತಿಳಿದೀತು?

ಹನುಃ—ನಾನೆಲ್ಲಾ ಬಲ್ಲೆ, ಎಲ್ಲಾ ದೂರಿನ ಗುಡ್ಡನುಣ್ಣಗೆ. ಆದರ ಸನಿ ಹೋಗೋಣ ನಡೆಯಿರಿ. ಅಲ್ಲಿ ಇಷ್ಟು ಸೊಗಸೆನಿಸಿದರೆ, ನೀವು ಹೇಳಿದ್ದನ್ನು ಕೇಳುತ್ತೇನೆ.

ಸಿದ್ಧಃ— ಅವಶ್ಯವಾಗಿ ನಡೆಯಿರಿ.

ಭೀಮಃ— ನಮ್ಮದೇನು ಅಡ್ಡಿಯಿಲ್ಲ ನಡೆಯಿರಿ. ನಾನು ಆಕಳ ಒಂದೆ ಕರು ಇದ್ದಂತೆ!

ಹನುಃ— ಇಲ್ಲಿ ಕುಳಿತು, ನಾವೇನು ಮನೆಮಾರುಗಳಿಸುವನದೆ ನಡೆಯಿರಿ. ಅಲ್ಲಿಗೆ ಹೋಗೋದರೊಳಗೆ ಹೇಗಾದರೂ ಹಸಿವೆ ಆಗುತ್ತದೆ; ಕವ್ಮಗೆ ವೋರೆ ತೊಳಕೊಂಡು, ಒಂದುಮುಂದಿನ ಆಶೆಬಿಟ್ಟು ಈ ಹೊಟ್ಟೆಯೆಮ್ಮೆಯನ್ನು ಮೇಸೋಣ. ( ಹೊರಡುವರು. )

ಸೋಮಃ— ಸಿದ್ದೂ, ಅಗೋ ಅಗೋ ನಿನ್ನ ಆಕಳು ಬಾಲನೆತ್ತಿ 'ಅಂಬಾ' ಎಂದು ಹೇಗೆ ಜಿಗಿಯುತ್ತ ಒರುತ್ತಿದೆ; ಇಲ್ಲೇ ಬಂತು.

ಸಿದ್ಧಃ— ಬಾ, ಬಾ ನನ್ನ ತಾಯೀ, ನಿನಗೇನು ಬೇಕು? ಹನುಮಾ

ನನ್ನ ಬುತ್ತಿಯನ್ನು ತಾ. ನನ್ನ ಗೋಮಾತೆಗೆ ತಿನಿಸುತ್ತೇನೆ.

ಹನು:— ಆದರೆ... ಉದರಂಭಟ್ಟರಿಗೇನು ಹೇಳುವಿ? ಉದರಂಭಟ್ಟರು ಹಸಿದು ಮಂತ್ರ ಹೇಳುತ್ತಿದ್ದರೆ, ದಕ್ಷಿಣ ದಿಕ್ಕು ತೋರಿಸಿ ಬಿಡುವಿಯೇನು? ನಿಮ್ಮಪ್ಪ ಕೇಳಿದರೆ ಹೀಗೆ ಹೇಳೋಣವೇ?

ಸಿದ್ಧ:— ಗೆಳೆಯಾ, ನನ್ನ ಗೋಮಾತೆ ತಿಂದರೆ, ನನ್ನ ಹೊಟ್ಟೆ ತುಂಬುವದು ( ತಿನ್ನಿಸ ಹೋಗುವನು )

ಹನು:— ಭಲೆ! ಇದೆಲ್ಲಿಯ ಹೊಸ ಶೋಧವಪ್ಪಾ? ನನಗೇನು ಹಾಗೆ ಆಗೋದಿಲ್ಲ — ನಿಮಗೋ ಭೀಮಾ? ಸೋಮಾ ನಿನಗೋ?

ಭೀಮ:— ಕೋಣಾ, ಇತ್ತನೋಡೋ ಹೂಗಳೆಷ್ಟೆಷ್ಟೋ ಅವೆ.

ಹನು:— ಈ ಹೂಗಳು ದಿನಾಲು ಇರುತ್ತವೆ; ಅವುಗಳ ಕೆಲಸ ವೇನು? ಮೊಗ್ಗೆ ಅರಳಿತು-ಹೂವಾಯ್ತು, ಬಾಡಿತು-ಉರಳಿ ಬಿತ್ತು. ಏನು ಮಾಡಿದಂತಾಯ್ತು? ಬಂದದ್ದಲ್ಲ, ಬಾರಿಸಿದ್ದಲ್ಲ.

ಸೋಮ:—ಭೀಮಾ ಈ ಹೊತ್ತಿನಲ್ಲಿ ಒಂದು ದೇವರಿರಬಾರದೇ? ಬೇಕಾದಷ್ಟು ಹೂ ತಂದು, ಪೂಜೆ ಮಾಡುತ್ತಿದ್ದೆವು.

ಹನು:— ನೋಡಿರಪ್ಪಾ ಪೂಜೆ ಮಾಡುವ ಹೊತ್ತು ಇವನದು?

ಸಿದ್ಧ:— ಈ ಹೂಗಳ ಬಳಗವೆಲ್ಲ ನೆರೆದು-ಕಣ್ತೆರೆದು ದೇವರ ಹಾದಿಯನ್ನೇ ನೋಡುತ್ತ ಎವೆಯಿಕ್ಕದೆ ನಿಂತಿರುವಾಗ ಅವನ್ನೊಯ್ದು ಪರಮಾತ್ಮಲಿಂಗಕ್ಕರ್ಪಣ ಮಾಡಿದರೆ, ಎಷ್ಟು ಸೊಗಸಾಗುವದು!!

ಸೋಮ:— ಮತ್ತು ಹೂಗಳನ್ಮವೂಜ ಸಾರ್ಥಕನಾಗುವದು!

ಹನು:— ಏನಪ್ಪಾ ಭಕ್ತರೇ, ಇಷ್ಟೇಲ್ಲಾ ಆಯ್ತು, ಆದರೆ ದೇವರೆಲ್ಲಿದೆ?

ಸೋಮು:---ಒಂದು ಮೂರ್ತಿಯನ್ನು ಸ್ಥಾಪಿಸೋಣ, ಕೆರೆಯ ದಂಡೆಗೆ!

ಹನು:--- ಇದ್ದ ದೇವರಿಗೇ ನೀರು ಹಾಕವರಿಲ್ಲ. ಮತ್ತೊಂದು ಮೂರ್ತಿ ಸ್ಥಾಪಿಸುವಿಯಾ? ಅದು ನಿನ್ನ ಹೆಸರುಗೊಂಡು ಅಳುತ್ತಿದರೆ, ಕಣ್ಣೀರು ಕೂಡ ಹೊರಡುವದಿಲ್ಲ.

ಸಿದ್ಧು:--- ಗೆಳೆಯಾ, ಅಷ್ಟು ಜಂಜಾಟವೇಕೆ? ಸರೋವರದ ದಂಡೆಗೆ ಒಂದು ಶಿವಾಲಯವೇ ಇದೆ.

ಭೀಮು:-- ಸರೋವರದ ದಂಡೆಗೆ? ಛೇ ಇಲ್ಲ ಬಿಡು. ಮತ್ತೆಲ್ಲಾದರೂ ನೋಡಿದ್ದಿಯಾದೀತು. ನೆನಪು ಮಾಡಿಕೋ.

ಹನು:--- ನಾ ಆಸರಂತ ಅಲ್ಲೇ ಸಾಯುತ್ತೇನೆ. ರತ್ನಪಕ್ಷಿ ಕಂಡಂತೆ ಒಮ್ಮೆಯಾದರೂ ನನ್ನ ಕಣ್ಣಿಗೆ ಬಿದ್ದಿಲ್ಲ!

ಸಿದ್ಧು:--- ಬನ್ನಿ ನಿಮಗೆ ತೋರಿಸುತ್ತೇನೆ. ( ತೋರಿಸುತ್ತ ) ಅಗೋ ಬೆಳ್ಳಗೆ ಬೆಳ್ಳಿ ಬಿಟ್ಟಂತೆ ಕಾಣುತ್ತದೆ. ಅದೇ ಶಿವಾಲಯವು!

ಹನು:---ಅಬಬಾ! ಇವನು ಕಣ್ಮಸಕು ಮಾಡಿದನು ಕಾಣುತ್ತೆ. ಎಲೋ ಮಾರಾಯಾ, ಬಂಗಾಲೀ ವಿದ್ಯಾ ಕಲಿತು ಬಂದೀಯೋನು ಮತ್ತೆ?

ಸೋಮು:---ಏನೇ ಆಗಲಿ ಪರಕೆ ಕೈಗೂಡಿತು. ಇನ್ನು ಹಾಗೇ ಹೂ ಹರಿಯುತ್ತ ಹೋಗೋಣ.

ಹನು:---ನಾನು ಹೇಳಿದಂತೆ ಕೇಳಿರಿಲ್ಲರೂ! ಒಬ್ಬೊಬ್ಬರು ಒಂದೊಂದು ಬಣ್ಣದ ಹೂ ಹರಿಯುತ್ತ ಹೋಗಿರಿ.

ಸಿದ್ಧು:--- ಹಾಗೇ ಆಗಲಿ, ನಾನು ಬಿಳೆಹೂಗಳನ್ನು ಆಯ್ದುಕೊಳ್ಳುತ್ತೇನೆ.

ಸೋಮಃ— ನಾನು ಹಳದಿ, ನೀನೋ ಭೀಮ?

ಭೀಮಃ—(ಹೂ ತೋರಿಸಿ) ನೋಡು, ಇದರ ಅನುರಾಗವೆಷ್ಟು? ನಾನು ಇಂಥ ಕೆಂಪು ಹೂಗಳನ್ನೇ!

ಹನುಃ— ಹಿರೇ ಮನುಷ್ಯನಾದ ನಾನು, ಹೋಳುಪ್ಪಿನಕಾಯಿ! (ನಗುವರು.)

ಸಿದ್ಧಃ— ಗೆಳೆಯರೇ, ಹೂಗಳು ಬರಲಿಕ್ಕೆ ಒಂಟಗಾಲಿನ ಮೇಲೆ ನಿಂತಿರುತ್ತವೆ! ಕೈಹಿಡಿಯುವಷ್ಟರಲ್ಲಿ ಕೈಯಲ್ಲೇ ಬರುತ್ತವೆ.

ಸೋಮಃ— ಅವು ದೈವ ತೆರೆಯಿತೆಂದು ಹಿಗ್ಗಿವೆ.

ಭೀಮ:— ಹಾಗಲ್ಲ ಸಿದ್ದಣ್ಣನ ಪುಣ್ಯ!

ಹನು:— ಹಾಗಲ್ಲರೋ, ಹೂಗಳ ಹೊಮ್ಮಾಲಿತನ! ಕೈಹಚ್ಚು ವದರೊಳಗೆ ಹರಕೊಂಡು ಬೀಳಬೇಕೇ? ನೋಡು. ಇದೆಂಥಾ ಗುಣ? ಒಂತು ನೋಡು ಗುಡಿ! (ಪೂಜೆಗೆ ಸಿದ್ಧರಾಗುವರು)

ಸಿದ್ಧಃ— ಪೂಜೆ ಮಾಡಿದರೆ ಭಕ್ತಿಯಿಂದ ಮಾಡಬೇಕು; ಭಕ್ತಿಯಿಲ್ಲದ ಪೂಜೆ ಚಿತ್ರದ ಮಲ್ಲಿಗೆಯಂತೆ. ಪೂಜೆಯ ಹೆಸರೇ ದೊಡ್ಡದಾಗುತ್ತೇ.

ಭೀಮಃ— ದುಡಿದರೂ ಜೀತ ಕೇಳಲಿಕ್ಕೆ ಮೋರೆಯಿಲ್ಲದಂತಾಗುತ್ತೇ, ಅದರಿಂದೇನು ಫಲ?

ಸೋಮಃ— ಸಿದ್ದಣ್ಣಾ ಪೂಜೆಗಿನ್ನು ಆರಂಭವಾಗಲಿ!

ಮೂವರು—

**ಪದ—ಧಾಟಿ— ಎನ್ನದು ಯಾವುದಯ್ಯಾ ಎಂಬಂತೆ**

**ಕಿರಿಯರ ಭಕುತಿಯಲ್ಲಿ! ಹೇ ದೇವಾ।**
**ಸರುವ ವ್ಯಾಪ್ತತೆಯೆಲ್ಲಿ ॥ಪ॥**

**ಧರೆಯಲೆಲ್ಲವನೊಂದೆ॥ ಪರಿಯಿಂದಲಿರುವಲ್ಲಿ ॥ ಅ. ಪ॥**
**ಅಣುರೇಣು ತೃಣಕಾಷ್ಠ ಭೂಗಗನಗಳಲ್ಲಿ ।**
**ಘನವಾಗಿ ನೆಲೆಸಿಹ ರೀತಿಯದೆಲ್ಲಿ ॥**
**ಹನಿಯೊಂದ ಕಡಲಿಂದ ತಂದು ಹಿಡಿವುದೆಲ್ಲಿ ।**
**ಚಿನುಮಯ ಜಗದೀಶಾ ಮೂರ್ತಿ ಪೂಜೆಯದೆಲ್ಲಿ ॥ ೧ ॥**
**ನಿನ್ನ ಮನೆಯಲಿ ಬೆಳೆದ ನಿನ್ನ ಹೂಗಳ ತಂದು ।**
**ಘನ್ನ ಪೂಜೆಯ ಸಾಳ್ಪಪರಿಯನ್ನು ಮನದಂದು ॥**
**ನನ್ನ ತನಯರ ನಲ್ಮೆ ಎಂದು ಭಾವಿಸುತಿಂದು ।**
**ಮನ್ನಿಸಿ ಪೊರೆವುದು ಕರುಣಾರ್ದ್ರ ದೃಷ್ಟಿಯಲ್ಲಿ ॥ ೨ ॥**

ಹನು:—ನಮ್ಮದು ಮುಗಿಯಿತಪ್ಪಾ ಪೂಜೆ! (ಸೋಮ ಭೀಮರು ನಮಿಸುವರು.) ನೋಡಿರಪ್ಪಾ, ಸಿದ್ದಣ್ಣ ಹೌಹಾರಿ ಕುಳಿತಿದ್ದಾನೆ: ಜೀವಂತನಾದರೂ ಇದ್ದಾನೋ ಇಲ್ಲವೋ?

ಸೋಮ:— ಎಲೋ ಸುಮ್ಮನಿರೋ! ಭೀಮಣ್ಣಾ ಸಿದ್ದಣ್ಣ ಬಲು ಹೆಚ್ಚಿನವ ನೋಡೋ.

ಭೀಮ:— ಅವನು ದೇವರಾಗಿ ಹುಟ್ಟಬೇಕಿತ್ತು, ಮನುಷ್ಯನಾಗಿ ಹುಟ್ಟಿದ್ದಾನೆ.

ಹನು:— ಇನ್ನೂ ಎಲ್ಲಿ ಹುಟ್ಟಿದ್ದಾನೆ? ಈಗ ಸಾಯುತ್ತಿದ್ದಾನೆ. ಅಗಳಾಡಿಸಿರೋ ಅವನನ್ನು? ಸಿದ್ದಾ— ಸಿದ್ದಣ್ಣಾ! ನೋಡೋ ಸೋಮಾ ನೀನೇ ಮಾತಾಡಿಸಿ ನೋಡು. ನಿನಗೂ ಅವನಿಗೂ ಮೇಳ ಅದೆ, ಕೆಸರು ನೀರಿನದು!

ಸೋಮ:— ಸಿದ್ದೂ! ಸಿದ್ದೂ!

ಭೀಮ:— ಬೇಡ, ಮಾತಾಡಿಸಬೇಡ: ಆತನ ಧ್ಯಾನ ಮುಗಿದ ಮೇಲೆ ತಾನೇ ಎಚ್ಚರಾಗುತ್ತಾನೆ.

ಹನು:— ಅಗೋ, ಕಲ್ಲಿನಂತೆ ಕುಳಿತ ಸಿದ್ದನ, ಕಣ್ಣೀರು ಸೆಲೆ

ಹರಿದಂತೆ ಹರಿಯಹತ್ತಿತು. (ವಿನಯದಿಂದ) ಅಳಬೇಡೋ ಅಪ್ಪಾ! ಜೀವ ಗಾಬರಿಯಾಗುತ್ತದೆ! ನಾನು ಹುಡುಗಾಟಿಕೆ ಮಾಡಿದೆನೆಂದು ಅಳುವು ಬಂತೇ! ಯಾರಾದರೂ ಚಿವುಟಿದರೋ ಹೊಡೆದರೋ! ಕಣ್ಮುಚ್ಚಿ ಕುಳಿತಾಗ ಚೇಳುಗೀಳು ಕಡಿಯಿತೋ?

ಸೋಮು:— ಹುಚ್ಚಾ ಇತ್ತಕೇಳು. ಭಕ್ತಿಯಿಂದ ಅವನ ಹೃದಯವು ಕರಗಿ ನೀರಾಗಿ, ಕಣ್ಣೀರು ಸುರಿಯುತ್ತವೆ! ನಮ್ಮಜ್ಜ ಹೇಳುತಿದ್ದ–ಭಕ್ತರಿಗೆ ಹೀಗಾಗುತ್ತದಂತೆ.

ಭೀಮು:— ಹೌದು ಪುರಾಣದಲ್ಲಿ ಹೇಳುತ್ತಿದ್ದರು. ಭಕ್ತಿಯಿಂದ ಕಣ್ಣೀರು ಸುರಿಯುವವರು, ಪೂಜೆ-ವ್ರತ ಯಾವುದನ್ನೂ ಮಾಡುವ ಆವಶ್ಯವಿಲ್ಲವಂತೆ!! ಅಗೋ ಸಿದ್ದಣ್ಣನು ಎಚ್ಚತ್ತನು.

ಸಿದ್ಧು:—(ವಂದಿಸಿ) ಗೆಳೆಯರೇ, ದೇವಪೂಜೆಯು ಎಷ್ಟು ಆನಂದದಾಯಕವು? ಆ ಪರಮಾತ್ಮನ ಮೂರ್ತಿಯು ಕಣ್ಣಿಗೆ ಹಬ್ಬದೂಟ! ಆತನ ಸ್ತೋತ್ರ-ಭಜನೆಗಳಂತೂ ಕಲ್ಲುಸಕ್ಕರೆ ತಿಂದಂತೆ! ಗೆಳೆಯರೇ, ದಿನಾಲು ಹೀಗೇ ಪೂಜೆ ಮಾಡೋಣ ಆ!

ಸೋಮು:—ಯಾರು ಬೇಡವೆನ್ನುತ್ತಾರೆ!

ಹನು:—ದೇವರಿಗೆ ಬೇಡಿಕೊಳ್ಳಿರಲ್ಲೋ?

ಸಿದ್ಧು:— ಬೇಡಿಕೊಳ್ಳುವಂತಿದ್ದರೆ ದೇವರನ್ನು ಪೂಜಿಸುವ ಕಾರಣವಿಲ್ಲ. ಯಾರಿಂದ ಕೆಲಸವಾಗುವಂತಿರುವದೋ, ಅವರನ್ನು ಒಲಿಸಿ ಬೇಡುವದನ್ನು ಬೇಡಬೇಕು. ಒಳ್ಳೇದು - ನೀನೇನೆಂದು ಬೇಡಿಕೊಳ್ಳುತ್ತಿ?

ಹನು:—ನಮ್ಮ ಬೋಳುಆಕಳು ಬೇಗ ಈಯಲೆಂದು!!

ಸಿದ್ಧು:— ಬಲು ದೊಡ್ಡ ವರ ಬೇಡುತ್ತೀ! ಮಾಮರಕ್ಕೆ ಹೋದಾಗ ಮಿಡಿಗಾಯಿಗಳನ್ನೇಕೆ ತಿನ್ನಬೇಕು? ಪಕ್ವವಾದವುಗಳನ್ನೆ ಬಯಸಬೇಕು.

ಹನು:—ನಮಗೆ ಯಾವುದೂ ಬೇಡ. ನೈವೇದ್ಯವಾಗಲಿ! ದೇವರದಂತೂ ಮುಗಿದಿದೆಯಲ್ಲವೇ?

ಸೋಮ:—ನನಗಂತೂ ಹಸಿವಿಲ್ಲ, ಉಂಡಂತೇ ಆಗಿದೆ?

ಭೀಮ:—ನನಗೂ ಬೇಡ ಹೊತ್ತು ಮುಳುಗಿತು, ಮನೆಯ ಹಾದಿ ಹಿಡಿಯೋಣ, ಸಿದ್ಧಾ, ನಾಳೆ ಬೇಗ ಬಾ.

ಸಿದ್ಧ:—ನಾನೆಂದೂ ತಪ್ಪಿಸುವದಿಲ್ಲ!

ಹನು:—ಅಪ್ಪಾ, ದೇವರ ಪ್ರಸಾದವನ್ನಾದರೂ ಸ್ವೀಕರಿಸಿರಿ! ಇಗೋ ತಂದ .ಹಣ್ಣುಗಳನ್ನು ನೈವೇದ್ಯ ಮಾಡಿ ಹಾಗೇ ಇಡಬೇಕೇ?

ಸಿದ್ಧ:—ಗೆಳೆಯಾ, ಅವನ್ನು ನಮ್ಮೆಲ್ಲರಿಗೂ ಸಲ್ಲಿಸು.

ಹನು:—ಹಾಗನ್ನಿರಪ್ಪಾ, ನಮ್ಮ ಹೊಟ್ಟೆಗೇ ತಿಂದಂತೆ ಮಾಡುತ್ತೀರಲ್ಲ? (ಹಂಚುವನು.)

ಎಲ್ಲರೂ:—(ಸ್ವೀಕರಿಸಿ) ನಡೆಯಿರಿನ್ನು (ಹೋಗುವರು.)

---

## ಚತುರ್ಥ-ಪ್ರವೇಶ.

---

(ಚಾಮಲದೇವಿಯು ದಾಸಿಯೊಡನೆ ಅರಮನೆಯಲ್ಲಿ)

ಚಾಮ:—ದಾಸೀ ಇಂದಿನ ಆನಂದವೇ ಬೇರೆ. ಇಂಥಾ ಆನಂದದ ಬೆಳದಿಂಗಳನ್ನು ಸೂರೆ ಮಾಡುವ ಸಿದ್ಧರಾಮನಂಥ ಚಂದ್ರಮನು, ಅರಮನೆಯಲ್ಲಿ ದಿನಾಲು ಉದಿಸಲಿ; ಸಮಾಧಾನದ ಸುವಾಸನೆಯನ್ನು ಬೀರುವ ಸಿದ್ಧರಾಮನಂಥ ಕುಸುಮವು, ನಮ್ಮಲ್ಲಿ ದಿನಾಲು ಅರಳಲಿ.

ದಾಸಿ:—ದೇವಿಯವರೇ ನಾನೂ ಧನ್ಯಳೆಂದು ಹಿಗ್ಗುತ್ತಿದ್ದೇನೆ. ದೈವಸಂಪನ್ನನಾದ ಸಿದ್ಧರಾಮನ ಸೇವೆಯೊದಗುತ್ತಿದ್ದರೆ ನಿಮ್ಮಲ್ಲಿ ಸಾವಿರ ಜನ್ಮಗಳನ್ನೆತ್ತಿ ತೊತ್ತಾಗಿರುವೆನು. ತಮ್ಮ ಅನುಗ್ರಹದಿಂದ ಸಿದ್ಧದೇವನ ಸೇವೆಯೊದಗಿದ್ದು ನನ್ನ ಸುದೈವವೆಂದೇ ತಿಳಕೊಂಡಿದ್ದೇನೆ.

ಚಾಮು:—ದಾಸೀ ಬಾಗಿಲಲ್ಲಿ ಯಾರೋ ಕಾದುಕೊಂಡು ನಿಂತಂತೆ ತೋರುತ್ತಿದೆ; ನೋಡು.

ದಾಸಿ:—(ಹೋಗಿಬಂದು) ವಿಶ್ವಾಸರಾಯ ದೇಸಾಯಿಗಳು ತಮ್ಮ ಭೆಟ್ಟಿಗಾಗಿ ತವಕರಾಗಿದ್ದಾರೆ.

ಚಾಮು:—ಅವರನ್ನಿತ್ತ ಬರಮಾಡು; ಮೊದಲು ಆಸನ ಹಾಕಿ ಹೋಗು. [ಹೋಗುವಳು.]

ವಿಶ್ವಾ:—ಮಹಾರಾಣಿಯವರಿಗೆ ವಿಜಯವಾಗಲಿ! [ಮಣಿಯುವನು.]

ಚಾಮು:—ವಿಶ್ವಾಸರಾಯರೇ ವಿಶೇಷವೇನಾದರೂ ಇತ್ತೋ?

ವಿಶ್ವಾ:—ವಿಶೇಷವೇನೂ ಇಲ್ಲ; ಒಂದು ವಿನಂತಿಯಿದೆ.

ಚಾಮು:—ಯಾವ ವಿನಂತಿ, ಹೇಳಿರಿ.

ವಿಶ್ವಾಸ:—(ಕೈಮುಗಿದು) ದಯವಿಟ್ಟು ರಾಣಿಯವರು, ಕೀಳರಿಗೆ ಮರ್ಯಾದೆ ಕೊಡುತ್ತಿರಬಾರದು!

ಚಾಮು:— [ಚಕಿತ] ಕೀಳರಿಗೆ?! ಕೀಳರಾರು?

ವಿಶ್ವಾಸ:—ಲಕ್ಷ್ಯಕ್ಕೆ ಬರವೊಲ್ಲದು ಕಾಣುತ್ತೆ; ಆ ಒಕ್ಕಲಿಗನ ಮಗ.—ಅಂಥಾ ಶೂದ್ರನಿಗೆ ದೊರೆಯುವ ಗೌರವ ಮರ್ಯಾದೆಗಳೆಂಬ ರಾಹುಕೇತುಗಳು, ರಾಜಮನೆತನದ ಸೂರ್ಯನಿಗೆ ಮತ್ತು ಉಚ್ಚ ವರ್ಣದ ಸಚ್ಚರಿತ್ರರೆಂಬ ಚಂದ್ರನಿಗೆ ಗ್ರಹಣ ಹಿಡಿಯುತ್ತಿರುವವು.

ಆ ಗ್ರಹಣವನ್ನು ಬಿಡಿಸಿ, ಕಗ್ಗತ್ತಲೆಯಿಂದ ನಮ್ಮನ್ನು ಉಳಿಸಿರಿ. ಇದನ್ನೇ ನಾನು ಬಿನ್ನಯಿಸಿಕೊಳ್ಳಬೇಕಾಗಿದ್ದು!

ಚಾಮ:-- ಓಹೋಹೋ ದೇಸಾಯರೇ! ಇಂಥ ವಿಚಾರದವರು ನೀವೊಬ್ಬರೇ ಇರುವಿರೋ, ಮತ್ತಾರಾದರೂ ನಿಮಗೆ ಬೆಂಬಲರಾಗಿ ಇದ್ದಾರೋ?

ವಿಶ್ವಾ:-- ಬೇಕಾದಷ್ಟು ಜನರುಂಟು.

ಚಾಮ:-- ಆ ಸಿದ್ಧದೇವನನ್ನು ಸತ್ಕರಿಸೆಂದು ನನಗೆ ಗುರುವಾಜ್ಞೆಯಾಗಿದೆ; ಅದನ್ನು ಮುರಿಯುವದು ಅಧರ್ಮವಲ್ಲವೇ?

ವಿಶ್ವಾ:-- ಪ್ರಜೆಗಳ ಮನಸ್ಸೋಯುತ್ತಿದ್ದರೆ, ಧರ್ಮವನ್ನೂ ತ್ಯಜಿಸಬೇಕಲ್ಲವೇ? ಪ್ರಜೆಗಳನ್ನು ಸಂತೋಷಗೊಳಿಸುವ ಸಲುವಾಗಿ, ಶ್ರೀರಾಮನು ಸೀತೆಯನ್ನು ಕೂಡ ಬಿಟ್ಟು, ಮಮತೆಯ ಕಟ್ಟನ್ನು ನಿರ್ದಯದಿಂದ ಹರಿದೊಗೆಯಲಿಲ್ಲವೇ?

ಚಾಮ:-- ಅದೆಲ್ಲಾ ಸರಿ! ದೈವಸಮಾನನಾದ ಸಿದ್ಧರಾಮನನ್ನು ಗೌರವಿಸುವುದನ್ನು ನಾನೆಂದಿಗೂ ಬಿಡಲಿಕ್ಕಾಗದು.

ವಿಶ್ವಾ:-- ದೈವಸಮಾನನೆಂದು ಹೇಳುವಿರಲ್ಲ? ಆ ಕುಡುವೊಕ್ಕಲಿಗನು ದೈವಸಮಾನನು ಹೇಗೆ?

ಚಾಮ:-- ಶ್ರೀ ರೇವಣಸಿದ್ಧ ಗುರುದೇವನ ಮುನ್ನುಡಿಯಂತೆ, ವಯಸ್ಸು ಇಳಿದ ದಂಪತಿಗಳಲ್ಲಿ ಉದಿಸಿ, ಅವರ ಬಡತನವನ್ನೂ, ಮುಪ್ಪನ್ನೂ ಸದೆಬಡೆದ ಆ ವಿಭೂತಿಯು ದೈವಾಂಶನಲ್ಲವೆ?

ವಿಶ್ವಾ:-- ಅಯ್ಯಯ್ಯೋ-- ಪ್ರತಿಒಬ್ಬರು ದೈವಾಂಶರೇ!

ಚಾಮ:-- ಹಾಗಾದರೆ, ಮೇಲುವರ್ಣದವರೆಂದು ಹೇಳಿಕೊಳ್ಳುವವರು ಕೀಳವರ್ಣದವರೆಂದು ಜರಿಯುವದನ್ನು ಬಿಟ್ಟು, ದೈವಾಂಶರಂತೆ ಕಾಣುವದಿಲ್ಲವೇಕೆ?

ವಿಶ್ವಾ:—ದೇವಿಯವರೇ, ಪ್ರಪಂಚವಲ್ಲಿ ಹಾಗೆ ನಡಕೊಂಡರೇ ಕಲ್ಯಾಣವಿದೆ; ಇರಲಿ. ನೀವು ಭಕ್ತಿವಂತರಾಗಿ, ಪಾರ್ವತಿಪುತ್ರನಾದ ಗಣಪತಿಯನ್ನು ಪೂಜಿಸಿದರೆ ನಿಮಗೆ ಅಪರಿಮಿತ ಪುಣ್ಯ ಬರುವದಿಲ್ಲವೇ? ನಮ್ಮಂಥವನೊಬ್ಬ ಮನುಷ್ಯನನ್ನು ದೇವಾಂಶ, ಅವತಾರಿ ಎಂದು ಗೌರವಿಸುವವರಲ್ಲಿ ಯಾವ ಪುರುಷಾರ್ಥವಿರುವದು?

ಚಾಮು:— ಯಾವ ಪುರುಷಾರ್ಥವೆಂದು ಕೇಳುತ್ತೀರಾ? 'ನಿಮ್ಮೂರಲ್ಲಿ ಹುಟ್ಟಿ ಬರುವ ಸಿದ್ಧರಾಮನನ್ನು ಗೌರವಿಸುತ್ತಿರು, ಎಂಬ ಗುರ್ವಾಜ್ಞೆಯು ಗೀತೆಯಾಗಿ ನನ್ನ ರಕ್ತಕಣಗಳಲ್ಲಿ ಹಾಡುತ್ತಿದೆ. ಶ್ರೀಮಂತಿಕೆಯ ಮಬ್ಬುಗತ್ತಲಲ್ಲಿ ಹುದುಗಿಕೊಂಡಿದ್ದ ನನಗೆ ಗುರುದೇವನು, ಬೆಳ್ಳಿಚಿಕ್ಕಿಯನ್ನು ತೋರಿಸಿದಂತಾಗಿದೆ; ಅಂದಿನಿಂದ ನನ್ನ ಜ್ಞಾನಕುಸುಮವು ವಿಕಸಿತವಾಗಹತ್ತಿದೆ; ಜೀವವಿಲ್ಲದ ಮೂರ್ತಿಗಳ ಪೂಜೆ ಮಾಡಿ, ಹೈರಾಣ ಆಗುವವಕ್ಕಿಂತಲೂ, ಸಿದ್ಧರಾಮನಂಥ ಪುಣ್ಯಾಂಶನನ್ನು ಗೌರವಿಸುವುದು ಪುಣ್ಯಕರವೆಂದು ಭಾವಿಸಿಕೊಂಡಿದ್ದೇನೆ; ನನ್ನ ವಿಚಾರದಂತೆ ನೀವೂ ವಿಚಾರಿಸಿದರೆ, ಎಲ್ಲಾ ನಿಜವೆಂದು ಕಂಡು ಬರುವದರಲ್ಲಿ ಸಂಶಯವಿಲ್ಲ.

ವಿಶ್ವಾ:—ತಮ್ಮ ಭಕ್ತಿಯಿರುವಲ್ಲಿ ನಡಕೊಳ್ಳುವದಕ್ಕೆ ಯಾರ ಪ್ರತಿಬಂಧವೂ ಇಲ್ಲ. ಆದರೆ ಪ್ರಜೆಗಳ ಮನನೋಯದಂತಾದರೂ ವ್ಯವಸ್ಥೆಯಿಡಿಸುವಿರೆಂದು ಆಶಿಸುವೆ.

ಚಾಮು:—ಆ ಬಗ್ಗೆ ಏನೂ ಹೇಳಲವಶ್ಯವಿಲ್ಲ.

ವಿಶ್ವಾ:— ಅಪ್ಪಾದರಾಯ್ತು. ನಾನಿನ್ನು ಹೋಗಿಬರುವೆನು. ( ಪರದೆ ಇಳಿವುದು ) ರಾಣಿಯಿರಲಿ, ಪಂಡಿತೆಯಿರಲಿ ಹೆಂಗಸರಂಥ ಹುಚ್ಚರು ಯಾರೂ ಇರುವದಿಲ್ಲ. ಒಳ್ಳೇದು; ಕಾರ್ಯಕ್ಕೆ ಕೈಹಾಕಿದ್ದೇ ನಿಜವಾಗಿದೆ; ಇನ್ನು ಆ ಸಿದ್ಧರಾಮಾದಿಗಳ ದೈವಾಂಶವನ್ನು ಬೈಲಿಗೆಳೆದು ಬಿಡುತ್ತೇನೆ; ಈ ಮಹಾಕಾರ್ಯವಲ್ಲಿ ಜಯವಾಗಬೇಕಾದರೆ,

ಜನರ ಬೆಂಬಲಬೇಕು. ಇವರಲ್ಲಿ ಅಪಜಯವಾದರೂ, ಜನಮತವು ತನ್ನತ್ತಾಗಿರಬೇಕಲ್ಲವೇ ? ( ಹೋಗುವನು )

---

## ಪಂಚಮ-ಪ್ರವೇಶ.

---

(ಅಡವಿಯಲ್ಲಿ ಸಿದ್ಧರಾಮ)

ಸಿದ್ಧ:— ಇಂದು ಗೆಳೆಯರನ್ನಗಲಿ ಬಂದುದಕ್ಕೆ, ಬಹಳ ಹಳಹಳಿಯಾದರೂ, ಏಕಾಂತದಲ್ಲಿ ಒಬ್ಬನೇ ಕುಳಿತು, ಈ ಸೃಷ್ಟಿಯ ಸೊಬಗನ್ನು ಮನದಣಿ ಉಂಡು, ತೃಪ್ತಿಪಡುತ್ತಿರುವೆನು; ಗೋವುಗಳು ಅಗೋ-ನಮ್ಮ ನವಣೆಯ ಹೊಲದಲ್ಲೇ ಮೇಯುತ್ತ ನಿಂತಿವೆ. ಯಾಕೆ ನಿಲ್ಲಲೊಲ್ಲವು! ನಾನಂತೂ ಈ ದಿನ್ನೆಯ ಮೇಲೆ ಕುಳಿತು ಬಿಡುತ್ತೇನೆ! [ ಏರಿಕುಳಿತು ] ಅಹಾ ಏನಿದು! ಒಂಟೆಯ ಮೇಲೆ ಕುಳಿತಂತಾಯಿತಲ್ಲ; ಅಥವಾ ಕೈಲಾಸ ಪರ್ವತವೆಂದು ಹೇಳುವರಲ್ಲ-ಅವರ ಅನುಭವ ಬಂದಂತಾಯ್ತೆನ್ನ ಬಹುದು. [ ಸ್ವಸ್ಥಚಿತ್ತನಾಗಿ ] ಏನಿದು ? ಎಲ್ಲೆಲ್ಲಿಯೂ ನಿಶ್ಶಬ್ದ! ನಿಜವಾಗಿದು ದೇವರ ಮನೆ! ಅವನ ಮನೆಯಲ್ಲಿ ಹೀನ ನುಡಿಗಳೆಲ್ಲಿ, ಅಂಥ ಇಂಥವರ ಸಂಚಾರವೇತಕ್ಕಾದೀತು! ಈ ನಿಶ್ಶಬ್ದವಾದ ಸೃಷ್ಟಿದೇವಿಯೊಡನೆ ನಿಶ್ಶಬ್ದವಾಗಿಯೇ ಮಾತಾಡುತ್ತ ಕುಳಿತರಾಯ್ತು. ಅಗೋ-ಗಾಳಿಯಂಥ ಉಡಾಳಹುಡುಗನೂ ಕೂಡ ನನ್ನಂತೆ ಕುಳಿತಿದ್ದಾನೆ; ಈ ಮರಗಳು ಸುಮ್ಮನೆ ನಿಂತು ಯಾರ ಮಾತಿಗೋ ಕಿವಿಗೊಟ್ಟಿರುತ್ತವೆ.

ತೆರೆಯಲ್ಲಿ:—‘ಸಿದ್ಧರಾಮಾ!’

ಸಿದ್ಧ:—[ ಬೆಚ್ಚಿ ] ಯಾರೋ ನನ್ನನ್ನು ಕರೆಯುತ್ತಾರೆ [ ಹೊರಳಿ ನೋಡಿ ] ಓಹೋ ಜಂಗಮಮೂರ್ತಿ! ಭಸ್ಮಲೇಪಿತನಾದ ಈತನು, ಶಿವನ ನಿವಾಸಸ್ಥಾನವಾದ ಬೆಳ್ಳಿಬೆಟ್ಟದಂತೆಯೇ ತೋರುತ್ತಿದ್ದಾನೆ;

ಥೀ ಪರಮಾತ್ಮನೇ ಇದ್ದಾನೆ, ಹೌದು! ಕೊರಳಲ್ಲಿ ರುಂಡಮಾಲೆ ಅದೆ. ಜಗದ್ವ್ಯಾಪಿಯಾದ ಪರಮಾತ್ಮನು, ನರರೂಪನಾಗಿದ್ದುದಕ್ಕೆ ಆತನ ಕೊರಳಲ್ಲಿಯ ರುಂಡಮಾಲೆಯ ಆಕಾರವೂ ಚಿಕ್ಕದಾಗ್ಗಿ ರುದ್ರಾಕ್ಷಿಯ ಸರದಂತೆ ಶೋಭಿಸುತ್ತದೆ. ನನ್ನ ದೇವನು ಇಲ್ಲಿಯತನಕ ಬಂದು ಪಣಿದಕಾರಣವೇನೋ! ( ಓಡುತ್ತ ಹೋಗಿ )

ಪದ— ಕರ್ನಾಟಕತೋಡಿ ರಾಗ-ತ್ರಿವೇಟ ತಾಳ.

ಗುರುವರನೆನ್ನ ಮನೆಗೆಯ್ದಿಹೆ ॥ ಪ ॥
ಪರಮನನಿಲಯುಕೆ ದಯುಗೆಯ್ದಿಹೆ ॥ ಅ. ಪ ॥
ತರುವುರಗಳು ಘನಮೌನತಾಳಿರೆ।
ವರಮಾರುತನು ಮಂದದೊಳಗೊರಗಿರೆ।
ಅರಿಯದ ಕಿರಿಯನ ನೆರೆಕೂಗಿದೆ ॥ ೧ ॥

[ವಂದಿಸಿ] ಗುರುವೇ, ಚಿಗರೆಯ ಮನೆಗೆ ಚಂದ್ರ ಬಂದಂತೆ, ನನ್ನಂಥ ಮುಗ್ಧಬಾಲಕನ ಕಡೆಗೆ ಬಂದುದು ನನಗೆ ಸಂತೋಷವನ್ನುಂಟು ಮಾಡುತ್ತದೆ; ಸಂತೋಷದ ಸುಳಿಗಾಳಿ ಬೀಸಿ, ನನ್ನ ಹೃದಯ ಸರೋವರದಲ್ಲಿ ಸೋಜಿಗದ ತೆರೆಗಳನ್ನುಂಟು ಮಾಡುತ್ತಲಿದೆ. [ಸಾಷ್ಟಾಂಗ ನಮಸ್ಕಾರ ಮಾಡುವನು.]

ಜಂಗಮಮೂರ್ತಿಃ—[ಹಿಡಿದೆತ್ತಿ ಅಪ್ಪಿ] ಮಗೂ, ದೇವಪ್ರೀತನಾಗಿ ಬಾಳು! ನನ್ನ ಕಲ್ಲುಸಕ್ಕರೇ, ನೀನೆಷ್ಟು ಸಣ್ಣ ಹರಳಾದರೂ, ರುಚಿಗೆ ಕೊರತೆಯಾದೀತೇ? ನನ್ನ ಗಿಳಿಯೇ, ನೀನಿನ್ನೂ ಶಿಶುವಾಗಿದ್ದರೂ ನಿನ್ನ ನುಡಿಗಳೆಷ್ಟು ಮನೋಹರ! ನಿನ್ನ ಕಂಠವೆಷ್ಟು ಮಧುರ! ಕಂದಾ, ವಿನಯದ ಬೆಳದಿಂಗಳನ್ನು ಸೂರೆ ಮಾಡಿದ ಚೆಲುವ ಚಂದ್ರಾ, ನಿನ್ನ ಕಂಡ ಕೂಡಲೇ ನನ್ನ ಹೃದಯ ಹೂವು ಅರಳಿಬಿಟ್ಟಿತು! ಮನೋಮೃಗವು ತನ್ನ ಒಡೆಯನ ದರ್ಶನದಿಂದ ಬೆಪ್ಪಾಗಿ ಬಿಟ್ಟಿತು!! ಭಲೇ! ಭಲೆ !!

ಸಿದ್ಧಃ—ಗುರುವೇ, ಮೊದಲು ನೆರಳಿಗೆ ನಡೆಯಿರಿ; ಇಂಥ ಬಿಸಿಲು ಬೇಗೆಯಲ್ಲಿ ಎತ್ತ ಹೊರಟಿದ್ದೀರಿ; ನನ್ನನ್ನು ಕರೆದುದೇಕೆ; ನಾನು ತಮ್ಮವನೇ ಇರುವೆನಾದ್ದರಿಂದ ಸಂಕೋಚವಿಲ್ಲದೆ, ನಿಮ್ಮ ಇಚ್ಛೆಯನ್ನು ತಿಳಿಸಿರಿ. [ಮೇಲೆ ಮುಖವೆತ್ತಿ ನೋಡಿ] ಅಹ್ಹಹ್ಹ!! ಇದೇನು, ಜಂಗಮಮೂರ್ತಿಯು, ಪರಮಾತ್ಮ ಸ್ವರೂಪನಾಗಿ ಕಾಣಿಸ ಹತ್ತಿದನಲ್ಲ!! (ಚಿಪ್ಪನಾಗಿ) ಇದೇನು ಭ್ರಮೆಯೋ, ಛೀ-ಭ್ರಮೆ ಯಲ್ಲ. ತಲೆಯಲ್ಲಿ ಗಂಗಾಮಾತೆ, ಅಗೋ ಹಣೆಯಲ್ಲಿ ಕೋಟಿಸೂರ್ಯ ಪ್ರಕಾಶವುಳ್ಳ ಹಣೆಗಣ್ಣು! ಕೊರಳಲ್ಲಿ ರುಂಡಮಾಲೆ! ಕೈಯಲ್ಲಿಯ ಕಮಂಡಲು, ತ್ರಿಶೂಲಗಳಿಂದ ಎಷ್ಟು ಭಯಂಕರನಾಗಿ ತೋರುವ ನಲ್ಲ!! ಪರಮಾತ್ಮಾ, ಈ ಧೀನ ಬಾಲಕನು ನಿನ್ನ ಕೃಪೆಗೆ ಋಣಿ ಯಾಗಿರುವನು, ದೇವಾ, ಈ ಉಪಕಾರವನ್ನು ನಾನೇತರಿಂದ ತೀರಿಸಲಿ! ನಿನ್ನ ಕರುಣಾಪ್ರಭಾವಕ್ಕೆ ಇಗೋ ಲೀನ-ದೀನನಾಗಿ ನಿನ್ನಡಿಗೆ ಬೀಳುತ್ತೇನೆ. [ಎರಗುವನು.]

ಜಂಗಃ—(ಎಬ್ಬಿಸಿ) ಮಗೂ, ನಿನ್ನ ಕಾಯ ಕುಸುಮವು ಪಾದಕ್ಕೆ ಯೋಗ್ಯವಲ್ಲ, ನನ್ನ ತಲೆಗೆ ಭೂಷಣವು!!

ಸಿದ್ಧಃ—(ಎದ್ದು ನೋಡಿ, ಮನದಲ್ಲಿ) ಎಂಥಾ ಆಶ್ಚರ್ಯವಿದು! ಪರಮಾತ್ಮಸ್ವರೂಪವು ಮಾಯವಾಗಿ, ಜಂಗಮಮೂರ್ತಿಯೇ ಪ್ರಕ ಟವಾಗಿದ್ದಾನಲ್ಲ! ಜಂಗಮಮೂರ್ತಿಯೇ ನೀನು ಪರಮಾತ್ಮಸ್ವರೂ ಪನು, ಪರಮಾತ್ಮಾ, ನೀನೇ ಜಂಗಮಮೂರ್ತಿಯು!

ಜಂಗಃ—[ಮುಗುಳ್ನಗೆಯಿಂದ] ಮಗೂ, ಮಾತಾಡಲೊಲ್ಲೆ ಯಲ್ಲ! ಗಾಬರಿಯಾದೆಯೋ? ಬೆದರಿದೆಯೇನು? ಬಾ ಇತ್ತ, ನಾನು ನಿನ್ನವನೇ ಇರುವೆ. [ಅಪ್ಪುವನು.]

ಸಿದ್ಧಃ— [ವಿನಯದಿಂದ] ಹಾಗಾದರೆ, ತಾವಾರು?

ಜಂಗಃ— ಮಗೂ, ನನ್ನ ಹೆಸರು ಮಲ್ಲಿಕಾರ್ಜುನ! ನನ್ನ ಸ್ಥಳ ಶ್ರೀಶೈಲ-ಪರ್ವತವು!

ಸಿದ್ಧಃ--- [ನಡುವೆ] ಓಹೋ ಶ್ರೀಶೈಲವು ಬಲುದೂರವಂತೆ, ಅಷ್ಟು ದೂರಿಂದ ಬಂದಿರಾ?

ಜಂಗಃ---ಹೌದು. ನಿನ್ನನ್ನು ಹುಡುಕುತ್ತ ಬಂದಿರುವೆನು.

ಸಿದ್ಧಃ---[ಕೈಮುಗಿದು] ನನ್ನನ್ನು ಹುಡುಕುತ್ತ ಬಂದಿರಾ? ಗುರುಗಳೇ, ಈ ನರಾಧಮನ ಮೇಲೆ ಎಷ್ಟೊಂದು ಭಾರಹೊರಿಸಿದಿರಲ್ಲ! ಹೇಳಿ, ಬೇಗನೆಹೇಳಿ! ಈ ದೀನನಿಂದ ತಾವು ಬಯಸುವುದೇನು?

ಪದ—ಧಾಟಿ--- ' ನಾಪೋಗಿ ಬರ್ಲೆ ನಾರಿಯುರೇ ' ಎಂಬಂತೆ

ಪೂರ್ತಿಗೆಯ್ವೆ ಮನದಾಶೆಯನ್ನು ಸಾರುವುದು ಶೀಘ್ರದಿ॥
ಮುಮುನೇತ್ರಕುಸುಮಗಳ ನೀವೆ।
ಮಾಲೆಗೆ ಶಿರವನು ಕಡಿವೆ॥
ನವಹೃದಯುಕಮಂಡಲಕೀವೆ।
ಮುಕ್ತಿಯು ಹೊಂದುವೆ ॥ ೧ ॥

ಜಂಗಃ--- ಅಯ್ಯೋ ಇವೇನೂ ನನಗೆ ಬೇಕಿಲ್ಲ!

ಸಿದ್ಧಃ--- ಬೇಕಾದುದನ್ನು ಕೇಳಿರೆಂದು, ಮೊದಲೇ ಬಿನ್ನವಿಸಿಕೊಂಡಿದ್ದೇನಲ್ಲವೇ?

ಜಂಗಃ--- ನಾನು ಬೇಡುವುದೇನು ಮಹತ್ವದ ಪದಾರ್ಥವಲ್ಲ- ನಿನ್ನನ್ನು ಹುಡುಕಿಹುಡುಕಿ, ದಣಿದುದರಿಂದ ಹಸಿವೆಯು ತಾಪವು ಬಹಳ ಬಾಧಿಸಹತ್ತಿದೆ; ಆದರಲ್ಲಿ ಬಿಸಿಲು ಬೇರೆ! ಅದಕ್ಕಾಗಿ ಎಳೆ ನವಣಿಯ ಕಾಳುಗಳನ್ನು ತಂದುಕೊಟ್ಟರೆ, ತಿಂದು ಕ್ಷುಧಾಬಾಧೆಯನ್ನು ಪರಿಹರಿಸಿಕೊಳ್ಳುತ್ತೇನೆ.

ಸಿದ್ಧಃ---ಗುರುವರಾ, ಇದಾವ ದೊಡ್ಡ ಮಾತು! ಇದಕ್ಕಿಷ್ಟು ಸಂಕೋಚ ಪಡಬೇಕೇ? ನಿಮ್ಮ ವಸ್ತು ನಿಮಗೆ ಬೇಕಾದರೆ ನನಗೆ ಕೇಳುವ ಅವಶ್ಯಕತೆಯೇ ಇಲ್ಲ; ಈಗಲೇ ತಂದುಕೊಡುವೆನು. (ಹೋಗುವನು.)

ಜಂಗಃ— [ಮನಸ] ಈ ಬಾಲಕನ ವಿನಯ-ಭಕ್ತಿಗಳು ನನ್ನನ್ನು ಮರುಳುಗೊಳಿಸುತ್ತಿವೆ; ನೋಡೋಣ. ಈ ಗಟ್ಟಿಯನ್ನು ಒರೆಹಚ್ಚಿ, ಚೊಕ್ಕಚಿನ್ನವೆಂಬದನ್ನು ಜಗತ್ತಿಗೆ ತಿಳಿಸಿಕೊಡುತ್ತೇನೆ.

ಸಿದ್ಧಃ— [ ಓಡುತ್ತ ಬಂದು ] ಗುರುವೇ ತಂದಿರುವೆ. ನಾನು ಕಾಳು ಮಾಡಿ ಕೊಡುತ್ತೇನೆ; ನೀವು ಸ್ವೀಕರಿಸಿರಿ !

ಜಂಗಃ— ಆಗಲಿ. ಸಿದ್ಧಾ, ನನ್ನ ಸಲುವಾಗಿ ನಿನಗೆ ದಣಿವಾಯ್ತು. ನಿನ್ನ ಭಕ್ತಿಯನ್ನು ಎಷ್ಟು ಕೊಂಡಾಡಲಿ ?

ಸಿದ್ಧಃ—ಗುರುವೇ, ಅಂಥ ಯೋಗ್ಯತೆಯು ನನಗೆಲ್ಲಿ? ಇದು ನನ್ನ ಕರ್ತವ್ಯವಲ್ಲವೇ ? ತಮ್ಮ ಕೃಪೆಯೊಂದಿರಲಿ. [ಕಾಳು ಕೊಡುವನು]

ಜಂಗಃ—( ತಿನ್ನುತ್ತ) ಅಹ್ಹ ! ಒಳ್ಳೇ ಹಾಲುತುಂಬಿದ ಬಲು ಎಳೆಯಕಾಳುಗಳು ! ಸಿದ್ಧಾ, ಇಂಥ ತಿನಸನ್ನು ನಾನೆಂದೂ ತಿಂದಿರಲಿಲ್ಲ. ನಿನ್ನ ಪುಣ್ಯದಿಂದ ಈಹೊತ್ತು ಹೊಸ ಅನುಭವವನ್ನು ಉಂಡಂತಾಯ್ತು!

ಸಿದ್ಧಃ— ಗುರುವೇ ಸಾವಕಾಶವಾಗಿ ಸ್ವೀಕರಿಸಿರಿ. ಇವಿಷ್ಟಾದ ಕೂಡಲೇ ಮತ್ತಿಷ್ಟು ತರುವೆನು.

ಜಂಗಃ— [ತಿನ್ನುತ್ತ] ಇದರ ಸವಿಯನ್ನು ನಾನು ಬಾಯಿಂದ ಹೇಳಲಾರೆ.

**ಧಾಟಿ—ಪದ—ಭೂಗರಾಗ—ತ್ರಿವಿಡಿತಾಳ.**

**ಬಗೆಗೊಳುತಿದೆ, ಹರುಷ ಸುಖವದು ॥ ಪ॥**
**ಕ್ಷುದೆಯ ಬೇಗೆಗೆ ಶಾಂತಿಜಲವು।**
**ಸುಧೆಯ ತಾಳಿದ ಧಾನ್ಯರೂಪವು॥**
**ಕುದಿವಮನವನು, ಮುದವಗೊಳಿಪುದು ।**
**ಚದುರ, ನಿನ್ನಯ ಭಕುತಿಯೆನಿತಿದು ? ॥ ೧॥**

ಸಿದ್ಧಃ— ಗುರುವೇ ಇನ್ನಿಷ್ಟು ತೆಗೆದುಕೊಂಡು ಬರುತ್ತೇನೆ; ಸ್ವಲ್ಪ ಕಾದುಕೊಂಡಿರ್ರಿ. ಓಡುತ್ತಲೆ ಬರುತ್ತೇನೆ. [ಹೋಗುವನು.]

ಜಂಗಃ—[ಚೀರಿ]ಅಯ್ಯೋ ಸತ್ತೆನು ಸತ್ತೆನು! [ನೆಲಕುರುಳಿವನು.]

ಸಿದ್ಧಃ — [ಹತ್ತಿರಕ್ಕೆ ಓಡಿಬಂದು] ಗುರುವೇ ಇದೇನಿದು? ಏನಾಯಿತು?

ಜಂಗಃ— [ಉರುಳಾಡುತ್ತ] ಅಯ್ಯಯ್ಯೋ ಹೊಟ್ಟೆಯ ಉರುಪು! ಸೀಸ ಕಾಸಿ ಸುರುವಿದಂತಾಗಿದೆ. ನನ್ನನ್ನು ದಹಿಸಿ ಬಿಡುವುದು. ಈ ತಾಪವನ್ನು ಹೇಗೆ ತಾಳಲಿ?

ಸಿದ್ಧಃ— (ಕರುಣೆಯಿಂದ) ಈ ಅವಸ್ಥೆಯನ್ನು ನಾನೆಂತು ಹೋಗಲಾಡಿಸಲಿ? ಗುರುವೇ, ಕಾಳುಗಳನ್ನೂದಿ ಕೊಡುವಾಗ ಒಳಗೇ ನಾವರೂ ಕಸುರು ಸೇರಿತ್ತೇ? ಮತ್ತೇನಾಯಿತು, ಈ ಪಾಪಿಯ ಹಸ್ತ ಸ್ಪರ್ಶದಿಂದ ಕಾಳುಗಳಲ್ಲಿ ಅಂಥ ಕ್ರೂರಶಕ್ತಿಯು ಉಂಟಾಯಿತೇ? ಅಯ್ಯಯ್ಯೋ ಎಷ್ಟು ಸಂಕಟ ಪಡುತ್ತೀರಲ್ಲ! ಮುಖವು ಕಂದಿದೆ! ಬೆವರು ಒಂದೇಸವನೆ ಸುರಿಯುಹತ್ತಿದೆ. (ಒರಸುತ್ತ) ಇದೇನು ಬಂತು! ಇದಕ್ಕೇನು ಮಾಡಲಿ?

**ಪದ—ಧಾಟಿ— ‘ ನಾಥೇ ಭೇದಹಾಜನಿ , ಎಂಬಂತೆ**

**ದೇವಾ ಗೈಯ್ಯಲೇನು।**
**ಬಗೆಗೆ ಹೊಳೆಯದೇನೂ ॥ ಪ॥**
**ಪರಿಹರಿಸು ಈ ತಾಪವ।**
**ಕರುಣಾ, ದಯಗೆಯ್ಯುದು ।**
**ಉರಿಯನ್ನಾರಿಪ ಶಾಂತಿಜಲವೇ।**
**ತ್ವರದಿ, ಬಾ-ವರಾ ॥೧॥**

ಗುರುಗಳೇ, ನೀವೇ ಹೇಳಿರಿ; ಯಾವ ಉಪಾಯ ಮಾಡಿದರೆ, ನಿಮ್ಮ ತಾಪವು ಶಮನವಾಗುವದು? ಹೃದಯವನ್ನು ಸೀಳಿ ಅದರ ರಕ್ತವನ್ನು ಮೈತುಂಬ ಹೂಸಿದರೆ ಶಾಂತವಾಗಬಹುದೇ? ಮುಗಿಲ ಮಾಮರದಲ್ಲಿಯ ಚಂದ್ರನೆಂಬ ಮಾವಿನಹಣ್ಣನ್ನು ಹೋಳಿ, ಅದರ ರಸವನ್ನು ಲೇಪಿಸಲಾ? ಕೈಲಾಸ ಪರ್ವತದಲ್ಲಿ ಚಳಿವೆಟ್ಟವನ್ನೆ

ಕಿತ್ತು ತಂದರೆ, ಅದರಲ್ಲಿ ತಂಗಿ ಸಮಾಧಾನ ಹೊಂದುತ್ತೀರಾ? ಯಾವು ವನ್ನು ಮಾಡಲಿ ಗುರುದೇವಾ?

ಜಂಗಃ— ತಮ್ಮಾ, ನಿನ್ನ ವೀರಭಕ್ತಿಯನ್ನು ನಾನೆಷ್ಟು ಕೊಂಡಾಡಲಿ? ನಿನ್ನ ತ್ಯಾಗ ಪ್ರಭೆಗೆ ನನ್ನ ಕಣ್ಣುಗಳು ಕುಕ್ಕ ಹತ್ತಿವೆ. ಆದರೆ, ಅಯ್ಯೋ ಎಂಥ ಸಂಕಟವಿದು! ಪಾಪ, ಹುಡುಗ-ದಣಿದು, ಪ್ರೀತಿಯಿಂದ ಕಾಳುದುರಿಸಿಕೊಟ್ಟು ತಿನ್ನಿಸಿದನು; ನನ್ನೊಡಲಿಗದು ಹಿತವಾಗಬಾರದೇ? ಬಯಸಿ ಬೇಡಿದ ಪ್ರಿಯ ವಸ್ತುವು, ವಿಷವಾಗಿ ಪರಿಣಮಿಸಬೇಕೆ?

ಸಿದ್ಧಃ—ಗುರುವೇ, ಹಸಿದು ಹಂಬಲಿಸಿ ಬಯಸಿದ ವಸ್ತುವು, ಈ ಪಾಪಿಯ ಹಸ್ತಸ್ಪರ್ಶದಿಂದ ಬೆಂಕಿಯಾಗಿ ಒಡಲು ಸೇರಿದಂತಾಯ್ತಲ್ಲ! 'ತೋರಮಾಣಿಕವು ಘೂರಿಕೆಂಡವಾಯ್ತು.'...... ಏನು ಮಾಡಲಿ! ಗುರುವೇ, ನಿಮ್ಮ ನಾಲಗೆಯಿಂದ ಹೊರಡುವ ಆಜ್ಞೆಯನ್ನೇ ನಿರೀಕ್ಷಿಸುತ್ತಿರುವೆನು.

ಜಂಗಃ— ಮಗೂ, ಒಂದುಪಾಯವು ಹೊಳೆಯುತ್ತಿದೆ; ಅದನ್ನು ಹೇಳಿದರೆ ಅಡ್ಡಹೊತ್ತಿನಲ್ಲಿ ನೀನೆಲ್ಲಿಂದ ತರುವಿ? ಹುಡುಗ ನೀನು?

ಸಿದ್ಧಃ— ಗುರುದೇವಾ, ಯಾವ ಸಂಕೋಚವನ್ನೂ ಪಡಬೇಡಿ.

ಜಂಗಃ—ಅದೇನು ಸಿಗಲಾರದ ವಸ್ತುವಲ್ಲ; ಮೊಸರನ್ನವಾದರೆ ನನ್ನೊಡಲಿಗೆ ಸಮಾಧಾನವಾಗಬಹುದೆಂದು ಅನಿಸುತ್ತದೆ;

ಸಿದ್ಧಃ— ಓಹೋ ಮೊಸರನ್ನವೇ? ಅದಾವ ಅಮೂಲ್ಯ ಪದಾರ್ಥವು? ಈಗಲೇ ತರುವೆ. (ಹೊರಡುವನು.)

ಜಂಗಃ— ತಮ್ಮಾ, ಅದಕ್ಕಾಗಿ ಈಗ ಮನೆಗೆ ಹೊರಟೆಯಾ? ಅಯ್ಯೋ ಬರುವ ವರೆಗೆ ನನ್ನ ಪ್ರಾಣದ ಗತಿಯೇನು? ಈಗ ಹೋದ ಕೂಡಲೇ, ನಿಮ್ಮ ಮನೆಯಲ್ಲಿ ಮೊಸರನ್ನವು ಸಿಕ್ಕುತ್ತದೆಯೇ?

ಸಿದ್ಧಃ— ಸಿಗದೆ ಏನು? ಇಷ್ಟರಲ್ಲಿ ತೆಗೆದುಕೊಂಡು ಬರುತ್ತೇನೆ; ದಯವಿಟ್ಟು ತಾವೆಲ್ಲಿಯೂ ಹೋಗಬಾರದು. [ಓಡುವನು.]

ಜಂಗಃ— ನಿಮ್ಮ ಮನೆಯು ಎಷ್ಟು ದೂರವೋ ಕಾಣೆ, ಅಯ್ಯೋ—ಎಂಥ ತಾಪವಿದು!

ಸಿದ್ಧಃ— (ತಿರುಗಿ ಬಂದು) ಗುರುದೇವಾ, ಈ ಒಲ್ಲಿಯಿಂದ ನೆರಳು ಮಾಡುತ್ತೇನೆ, ಬಿಸಿಲು ಬಹಳವದೆ. ನೆರಳು ಮಾಡಿದರೆ, ಕೊಂಚ ಸಮಾಧಾನವೆನಿಸಬಹುದಲ್ಲವೆ?

ಜಂಗಃ—ಅಯ್ಯೋ ನನ್ನ ತಾಪಕ್ಕಾಗಿ, ನೀನೂ ಕಷ್ಟಪಡಬೇಕಾಯ್ತಲ್ಲ!

ಸಿದ್ಧಃ— ಹಾಗೇನೂ ಇಲ್ಲ. (ನೆರಳು ಮಾಡಿ, ತಿರುತಿರುಗಿ ನೋಡುತ್ತ ಮನೆಗೆ ಹೋಗುವನು.)

ಜಂಗಃ— (ಎದ್ದು ಕುಳಿತು) ಎಂಥಾ ಬಾಲಭಕ್ತನಿವನು? ಈ ರತ್ನವನ್ನು ಹೆತ್ತ ಪುಣ್ಯಾತ್ಮಳ ಉದರಾಂಬುಧಿಯೇ ಧನ್ಯ! ಈತನ ಬಾಯಿಂದ ಹೊರಡುವ ಪ್ರತಿಶಬ್ದವೂ ಮಧುರವಾಗಿ-ಮೃದುವಾಗಿ-ನಯವಾದ ವಿನಯದೊಡನೆ, ರೇಶಿಮೆಯದಾರದಲ್ಲಿ ಮುತ್ತು ಪೋಣಿಸಿದಂತೆ ಮನೋಹರವೆನಿಸುತ್ತಿದೆ; ಮಾತಿನ ಭಾವವು ಭಕ್ತಿರಸದಿಂದ, ಪಾಡಿಗೆ ಬಂದ ಹಣ್ಣಿನಂತೆ ತುಂಬಿರುತ್ತದೆ; ಮುಖವಂತೂ ತೀರ ಮುದ್ದು. ಇಂಥ ದೇವಶಿಶುವು ಭೂಲೋಕಕ್ಕೆ ತಪ್ಪಿ ಬಂದಿದೆ. ಅಜ್ಞಾನಾಂಧಕಾರದಲ್ಲಿ ಮಲಗಿದ ಜನರಿಗೆ ಈ ಮಂಗಲಗ್ರಹದ ಬೆಳಕು ಹೇಗೆ ಕಾಣಿಸಬೇಕು? ಎಂದೆಂದೂ ಕಾಣಿಸುವದಿಲ್ಲ. ಅಂಥ ಸಮಯವು ಈಗ ಬಂದಿದೆ. ನಾನೀಗ ಹೂಡಿರುವ ಈ ಆಟದಿಂದಲೇ ಈ ರತ್ನವು ಬೆಳಕಿಗೆ ಬರುತ್ತದೆ. ಈಗ ಸಿದ್ಧಾರಾಮನು, ಮೊಸರನ್ನ ತರಲಿಕ್ಕೆ ಮನೆಗೆ ಧಾವಿಸಿರುವನಷ್ಟೇ? ಅವನು ಬರುವಷ್ಟರಲ್ಲಿ ನಾನಿಲ್ಲಿಂದ ಮಾಯವಾಗಿ ಬಿಡುತ್ತೇನೆ; ನೋಡೋಣ, ಮುಂದಿನ ಸಂಗತಿಯನ್ನು! ನಾನಂತೂ ನನ್ನ ಸ್ಥಾನವನ್ನು ಹೇಳಿದ್ದೇನೆ, ಭಕ್ತಿಯಿದ್ದರೆ, ನನ್ನನ್ನರಸುತ್ತ ಬಂದೇ ಬರುವನು; ಅವನು ಹೋಗಿ ಬಹಳ ಹೊತ್ತಾದ್ದರಿಂದ ನಾನು ಬೇಗನೆ ಇಲ್ಲಿಂದ ತೆರಳಬೇಕು. (ಹೋಗುವನು.)



# ಷಷ್ಠ-ಪ್ರವೇಶ.

(ಮುದ್ದುಗೊಂಡನ ಮನೆ)

ಸುಗ್ಗಲೆ:— (ಹಿಗ್ಗಿನಿಂದ)ನನ್ನ ಅರಗಿಳಿಯು, ಇಂದು ಬಾಯ್ಬಿಚ್ಚಿ ಮಾತಾಡಿತು! ಇಂದು ಮಾತ್ರ ನನ್ನ ಜನ್ಮಸಾರ್ಥಕವಾಯ್ತು.

ಮುದ್ದು:— (ಬಂದು) ಏನೇ ಸುಗ್ಗಲೇ, ಒಬ್ಬಳೇ ನಿಂತು ಕೊಂಡು ಏನು ಯೋಚಿಸುತ್ತಿರುವೆ? ಮೋರೆಯ ಮೇಲೆ ಸಂತೋಷದ ಸುಳಿಯು, ಮುಚ್ಚಿಟ್ಟುಕೊಂಡರೂ ಕಾಣಿಸುತ್ತವೆ! ಅಂಥ ಸಂತೋಷದ ವಿಚಾರಯಾವುದು?

ಸುಗ್ಗ:— ನನ್ನ ಸಿದ್ಧಯ್ಯನು ಬಂದು, ಹೃದಯದ ಕಡಲಲ್ಲಿ ಸಂತೋಷದ ತೆರೆಗಳನ್ನೆಬ್ಬಿಸಿದನು, ಆ ಸಂತೋಷವನ್ನು ಸೂರೆ ಮಾಡಬೇಕೆಂದು—

ಮುದ್ದು:— ಯಾರ ಮೇಲೆ ಸೂರೆ ಮಾಡಬೇಕೆಂದು? ಬಾಗಿಲಲ್ಲಿ ಅಂತೇ ನನ್ನ ಹಾದಿ ನೋಡುತ್ತ ನಿಂತಿದ್ದೆಯೇನು? ಸಿದ್ಧರಾಮನ ಸಮಾಚಾರವೇನು?

ಸುಗ್ಗ:— ಸಮಾಚಾರವೆಂದರೆ-ನಡುಮಧ್ಯಾನ್ನದಲ್ಲಿ ನೂಲುತ್ತ ಕುಳಿತಿದ್ದೆ, 'ಅವ್ವಾ-ಅವ್ವಾ' ಎಂದು ದನಿ ಬಂತು. ಯಾರೆಂದು ನೋಡಿದರೆ—

ಮುದ್ದು:—ಸಿದ್ಧರಾಮ!

ಸುಗ್ಗ:—ಯಾರೆಂದು ನೋಡಿದರೆ, ನನ್ನ ಸಿದ್ಧದೇವ! 'ಏಕೆ ಕಂದಾ' ಎಂದು ಕೇಳಿದೆ. "ಮೊಸರನ್ನದ ಬುತ್ತಿ ಕಟ್ಟಿಕೊಡೆಂ"ದನು!

ಮುದ್ದು:—ಭಲೇ, ಸಿದ್ಧದೇವನೇ ಅಂದನೇ, ಮೊಸರನ್ನದ ಬುತ್ತಿ ಕಟ್ಟಿಕೊಡೆಂದು?

ಸುಗ್ಗಃ--ಹೌದು ಹೌದು! ಸಿದ್ಧರಾಮನಾಡಿದ ನುಡಿಗಳೇ!

ಮುದ್ದುಃ--ನನ್ನ ಹಂಸನು, ಹಸಿದು ಹಾಲು ಬೇಡಿದ್ದನ್ನು ನನ್ನ ಪಾಪಿಕಿವಿಗಳು ಕೇಳಬಾರದೇ? ಇರಲಿ. ನೀನಾದರೂ ಪುನೀತಳಾದೆ ಯಲ್ಲ! ಬುತ್ತಿ ಕಟ್ಟಿಕೊಟ್ಟೆಯಾ ಕಂದನಿಗೆ? ಏನು ಇಲ್ಲೇ ಉಂಡು ಹೋಗು ಅಂದೆಯೋ?

ಸುಗ್ಗಃ--ಹಾಗೇನೂ ಅನ್ನಲಿಲ್ಲ, ಮರುಮಾತಾಡದೆ ಬುತ್ತಿಕಟ್ಟಿ ಕೈಯಲ್ಲಿಟ್ಟೆ. ತೆಗೆದುಕೊಂಡವನು--ಮತ್ತೆ ಜಿಗಿದನೇ ಹೊಲಕ್ಕೆ!

ಮುದ್ದುಃ--ಪ್ರಿಯೆ ಈ ಸಂತೋಷದ ಸಮಾಚಾರ ಹೇಳಿದ ರಿಣ ವನ್ನು, ಈ ಮುದ್ದುಗೊಂಡನು ಏನು ಕೊಟ್ಟು ತೀರಿಸಬೇಕು?

ಸುಗ್ಗಃ--ನಿಮ್ಮ ಹೆಸರೇ ಕೊಟ್ಟು ಬಿಡಿ, ಸಾಕು! (ಇಬ್ಬರೂ ನಗು ವರು.)

[ಪರದೆ ಇಳಿಯುವದು.]

---

## ಸಪ್ತಮ-ಪ್ರವೇಶ.

---

ಸಿದ್ಧಃ--(ಧಾವಿಸಿ ಬಂದು) ಓಹೋ, ನನ್ನ ಗುರುದೇವನು ಎಲ್ಲಿದ್ದಾನೆ? ನಾನು ನೆರಳು ಮಾಡಿ ಕುಳ್ಳಿರಿಸಿದ ಸ್ಥಳವು ಇದೇ ಅಲ್ಲವೇ? ಹೌದು ಇದೇ! ನೆರಳು ಮಾಡಿದ ಧೋತರವೂ ಇಲ್ಲ-ಗುರು ವರನೂ ಇಲ್ಲ. ಅಯ್ಯೋ ನನ್ನ ಸೂರ್ಯಮುಳುಗಿ, ಲೋಕವನ್ನೆಲ್ಲಾ ಕಗ್ಗತ್ತಲೆಯಿಂದ ಹೆಣೆದನಲ್ಲ! (ಕುಳಿತು ಬಿಡುವನು.) ನಿರಾಶೆಯೇಕೆ? ಒಡಲುರಿ ಹೆಚ್ಚಾಗಿ ಈ ಕೃತ್ರಿಮನೆಳಲು ಸಾಕಾಗದೆ ಮತ್ತಲ್ಲಾದರೂ ಮರದ ನೆರಳಿಗೆ ಹೋಗಿದ್ದಾರು. (ಸುತ್ತುನೋಡಿ) ಅಗೋ, ಅಲ್ಲೊಂದು ಮರವಿದೆ: ಅದರ ಕೆಳಗೆ ಕುಳಿತಿರಬೇಕು. ಹುಡುಕಾ ಡೋಣ. (ಹೊರಟು)

ಪದ—ಧಾಟಿ— "ನರಜನ್ಮವಿದು, ನರಜನ್ಮವಿದು "

ಗುರುದೇವನನ್ನು—ಗುರುರಾಯುನನ್ನು ॥
ಮರಮರಗಳ ಚರಿಸಿ ಅರಸುವೆ ನೋಡದಿ ।
ಉರಿಯೊಡಲನು ಶಾಂತಿಗೊಳಿಸುವೆನು ॥೧॥

ಮರಗುತ ಕಾನನ ಸೇರಿದನೇನೊ ।
ಭರದಿ ಕೆರೆಯುಲಿ ಧುಮುಕಿದನೋ ॥೨॥

(ನೋಡಿ) ಅಯ್ಯಯ್ಯೋ ಈ ಮರದ ನೆರಳಿಗೂ ತಂಗಿಲ್ಲ ನನ್ನ ಗುರುದೇವನು! ಇದೇ ಮರವು ಒಳ್ಳೇ ದಪ್ಪನಾಗಿ ನೆರಳನ್ನು ಹಾಸಿದೆ; ಇದರ ಕೆಳಗೆ ಬಂದಿಲ್ಲವೆಂದರೆ, ಆ ಮರದೆಡೆಗೆ ಹೋಗಿರಬೇಕೇನು? ಒಡಲುರಿ ತಾಳದೆ, ಸರೋವರದ ತೀವಿನಲ್ಲಿ ಬಿದ್ದುಕೊಂಡಿರಬೇಕೇನು? (ಹಳಹಳಿ.) ಗುರುದೇವಾ, ನಾನು ತಡಮಾಡಿದೆನೆಂದು, ತಿರಳಿಲ್ಲವಷ್ಟೇ? ನಾನಾದರೂ ಬೇಗನೆಯೇ ಬಂದಿರುವೆನು! ಗುರುವೇ, ನನ್ನ ಮೇಲೆ ಮುನಿಸಾಗಿಲ್ಲವಷ್ಟೇ? ಛೇ, ಕರುಣಾಕರನಾದ ನೀನು ನನ್ನಂಥ ಬಾಲಕನ ಅಪರಾಧವನ್ನು ಮನ್ನಿಸದಿರುವೆಯಾ? ಹೀಗೆ ನಿಂತುಕೊಂಡು ಫಲವಿಲ್ಲ, ಮುಂದಕ್ಕೆ ಹೋಗಿ ಹುಡುಕಬೇಕು. (ಅವಸರದಿಂದ ತಿರಳುವನು.)

೧ನೇ ಅಂಕವು ಮುಗಿದುದು.





ಸಿದ್ಧರಾಮೇಶ್ವರನು ಕಮರಿಯ ಕೊಳ್ಳದಲ್ಲಿ ಹಾರಲಿಕ್ಕೆ
ಯತ್ನಿಸಿದ್ದು.

# ೨ನೇ ಅಂಕಂ.

## ಪ್ರಥಮ-ಪ್ರವೇಶ.

ಕಲ್ಲ್ಯಾಣೀ:— [ಆರಿದ ದೀವಟಿಗೆಯನ್ನು ಕೈಯಲ್ಲಿ ಹಿಡಕೊಂಡು] ಬಲು ಹೈರಾಣವಪ್ಪಾ, ಈ ಪರೂತದ ಜಾತ್ರಿ. ನಾ ತಿಳಕೊಂಡಿದ್ದ ಒಳ್ಳೇ ಮೋಜೆಂದು, ಆದರೆ ಈಗ ಫಜೀತ್ಯಾಗ ಸಿಕ್ಕಂಗಾಗೈತಿ! (ನೋಡಿ) ಅಗೋ, ಅತ್ತಿಂದ ಯಾರೋ ಬರತಾರೆ; ನಮ್ಮ ಕುಳಾನೇ ಕಾಣ್ತದೆ. (ಗುರುತಿಸಿ) ಓಹೋಹೋ ನಮ್ಮ ಪರಬಯ್ಯನವರು! ಯಾಕ್ರೀ ಗುರುವೇ, ಹಿಂಡು ಬಿಟ್ಟು ಎಲ್ಲಿ ತಪ್ಪಿಸಿಕೊಂಡಿತ್ತುಮರಿ?

ಪರಬಯ್ಯ:— [ಕಾವಡಿ ಹೊತ್ತುಕೊಂಡು ಬಂದು] ಏನು ಕೇಳ್ತಿಬಾ ನನ್ನ ಸುಡಿಗೆ! ಆ ಪಡುವಣ ನಾಡಿನ ಪರಸಿಯವರು, ಜಂಗಮರಿಗೆ ಕರಿಗಡಬು ಹೆರ್ತುಪ್ಪಿನ ಊಟ ಹಾಕಿಸಿದರು. ಬಾಡಿಸಿಕೊಳ್ಳಲಿಕ್ಕೆ ಜತೆಗೆ ಬುರಬುರಿ! ನಾಲಿಗೆಗೆ ರುಚಿ ತಗೊಂಡಿದ್ದು. ಜಗ್ಗಿ ಹೊಡೆದೆ; ಎಣಿಸಿ ಹದಿನಾರೇ ಮತ್ತೆ! ಆವರೂ ಹೊಟ್ಟೆಭಾರವಾಗಿ, ನಡೆಯಲಿಕ್ಕೇ ಬರಲಿಲ್ಲ. ಆದ್ದರಿಂದಲೇ ಪರಸೆಯವರು, ಮುಂದೆ ಹೋಗಿದ್ದಾರೆ. "ಪ್ಯಾಣ ಬಿಟ್ನು ಪ್ಯಾಣ ಮಾಡಿದರ ಮ್ಯಾಣ ಬಿತ್ತೋ ಮಲ್ಲಯ್ಯ!"

ಕಲ್ಲ್ಯಾಣೀ:—ಈ ಕಂಬಿಯನ್ನು ಹೊರ್ರೋದು ಬೇರೆ.

ಪರ:—ಅಪ್ಪಾ; ನಾನೇ ಇನ್ನೂ ಜಾಣತನ ಮಾಡಿ, ಇನ್ನೂ ಏಳು ಕಂಬಿಗಳನ್ನು ನಮ್ಮೂರ ಹತ್ತರ ಒಂದು ಹಳ್ಳಿಯಲ್ಲಿ ಒಗೆದಿದ್ದೇನೆ! ಅವಷ್ಟಿದ್ದರೆ, ನನ್ನ ಪ್ರಾಣ ತಿಂತಿದ್ದವು.

ಕಲ್ಲ್ಯಾಣೀ:—ಅಷ್ಟು ಕಂಬಿಗಳ ಇಸಾರವ್ಯಾಕೆ ಹೊರಬೇಕು?

ಪರ:—ಹೊಟ್ಟೆಗಾಗಿ ನಾಲ್ಕು ದುಡ್ಡಿನ ಆಶೆಗಾಗಿ! ವರ್ಷವಲ್ಲಿ ಇದೊಂದು ಸುಗ್ಗಿಯನ್ನು ಬಡಕೊಂಡರೆ, ವರುಷದ ಗಂಜಿ

ಯಾಯ್ತು. ಮಡಿಯುವ ಕಾರಣವೇ ಇಲ್ಲ- ಊಟಂತೂ ಭಕ್ತರ ಮೇಲೆ ಹೋಗುತ್ತದೆ. ಕಂಬಿಯ ರೂಪಾಯಿಗಳು ಪವರಲ್ಲಿ! ಹೊಟ್ಟೆ ಮಂದೀ ಮ್ಯಾಲೆ ಹೋಯ್ತು ತಂಬೂರಿ ಮನೀಗಿ ಬಂತು; ನಡಿಯಪ್ಪಾ ಮತ್ತೇನಿದೆ!

ಕಲ್ಯಾಣಿಃ--ನಾನೂ ಅದೇ ವಿಚಾರ ಮಾಡಿಯೇ ಚೆನ್ನವೇಪ ಸಾವಕಾರನಲ್ಲಿ ಕೂಲಿಯಂತೆ ಬಂದೆ; ಬರಬಾರದು ಬಂದು ಬಲು ಹುಚ್ಚಬಾರಿಗೆ ಆದೆ.

ಪರಃ--ಹುಚ್ಚಾ, ನಿನಗೇನಾಗಿದೆ? ಜಂಗಮರ ಪಂಕ್ತಿಗೆ ಊಟ ಮಾಡಿ ಮಾಡಿ, ಮೈಮೇಲೆ ಖಂಡ ಏರಹತ್ತಿದೆ; ಊರಲ್ಲಿ ಇಷ್ಟು ಪಿಂಡು ಇದ್ದೆಯಾ? ಈಗ ಒಳ್ಳೇ ನುಣ್ಣಗೆ ಕಾಣಿಸುತ್ತೀ.

ಕಲ್ಯಾಃ--ಏನು ಕೂಳು ಹೋಗ್ತದೇರೀ, ಲೆಕ್ಕಿಲ್ಲ. ಹಸರು ತಂಬಾಕಿನ ಪುಣ್ಯ ಏನು?

ಪರಃ--ಹೌದು. ಅದರಿಂದ ಕೂಳು ಬಹಳ ಹೋಗುತ್ತದೆ. ಅಂತೇ ಹೀಗಾಗಿರುವಿ.

ಕಲ್ಯಾಣಿಃ--ಕಷ್ಟ ಭಹಳರೀ. ಸುಖಾ ಇರುತ್ತಿದ್ದರೆ, ಮನುಷ್ಯಾ ಇನ್ನೂ ಜಡಿದು ಹೋಗುತ್ತಿತ್ತು. ನೀವೇನು ಬಲ್ಲಿರಿ. ಒಂದ್ಹೊತ್ತು ಕೂಳು ಹೆಚ್ಚಾದರೆ ತಾಳೇನು, ಮಲ್ಲಯ್ಯನ ಪ್ರಸಾದ ಬೇಕಾದಷ್ಟು ತಗೊಂಡೇನು, ಇನ್ನೊಂತಾಸು ಹೆಚ್ಚಿಗೆ ಮಲಗೆಂದರೆ ಹಾಗೂ ಮಾಡುವೆನು. ಆದರೆ, ದೀವಟಿಗೆ ಹಿಡಿಯೋದು, ನೀರು ಹೊರೋದು ಬಲು ಕಷ್ಟ. ನಿಮ್ಮದು ಬಲು ಸೊಗಸು. ನಾನೂ ಒಬ್ಬ ಅಯ್ಯನಾಗಿ ಏಕೆ ಹುಟ್ಟಲಿಲ್ಲ?

ಪರಃ--ಮಗನೇ, ಎಲ್ಲರಿಗೂ ಆ ಪದವಿ ಹೇಗೆ ಸಿಕ್ಕೀತು? ಪುಣ್ಯ ಮಾಡಿ ಬರಬೇಕು ಪುಣ್ಯ! ಪಡಕೊಂಡು ಬರಬೇಕು ಪಡಕೊಂಡು?

ಕಲ್ಲಪ್ಪ:—ಪುಣ್ಯ ಮಾಡಬೇಕಾದರೂ ಕಷ್ಟ ಪಡಬೇಕಾಗುವದು. ಕಷ್ಟಬಟ್ಟು, ಪುಣ್ಯಮಾಡಿ, ಅಯ್ಯನಾಗಿ ಹುಟ್ಟೋಕಿಂತಾ, ಇದೇ ಕಷ್ಟನವುಗಿರಲಿ! ಬೇಗ ಹೆಜ್ಜೆ ಕಿತ್ತಿರಿನ್ನು! ನಿವ್ಮ ಜತೆಗೆ ನಡದರೆ, ನವ್ಮ ಕೂಲಿಯು ಮೇಲೆ ಕಲ್ಲು ಬಿದ್ದೀತು. ಪರಸಿಯುವರನ್ನು ಕೂಡಿ ಕೊಳ್ಳೋಣ.

ಪರ:—ಹೀಗೇನು? ಹಾಗಾದರೆ ನಡಕ್ಕೆ ಒಲ್ಲೀಬಿಗಿಯುವೆ. ನಾನು ಇದೇ ಈಗ ಕುದುರೆ ಏರಿರುವೆ. [ಎಂದು ಹೋಗುವರು.]

---

## ದ್ವಿತೀಯ-ಪ್ರವೇಶ.

---

(ಅರಣ್ಯದಲ್ಲಿ ಸಿದ್ಧರಾಮನು)

ಸಿದ್ಧರಾಮ:— [ಸುತ್ತಲೂ ನೋಡುತ್ತ] ಸಿಗಲಿಲ್ಲ, ಕಡೆಗೂ ನನ್ನ ಗುರುದೇವನು ಸಿಗಲಿಲ್ಲ. ಹಳ್ಳಕೊಳ್ಳ ಗಿಡಮರಗಳೆಲ್ಲಾ ತಿರುಗಿದೆ. ನನ್ನಯ್ಯನು ಎಲ್ಲಿ ಅಡಗಿದ್ದಾನು? ನನ್ನ ಗುರುವರನ ಸಮಾಚಾರವನ್ನು ಯಾರು ತಂದು ಕೊಟ್ಟಾರು? ಹಕ್ಕಿಗಳಿರಾ, ನೀವು ಮುಗಿಲಲ್ಲಿ ಹಾರಾಡುವಿರಿ; ನನ್ನ ಗುರುದೇವನನ್ನು ಎಲ್ಲಿಯಾದರೂ ಕಂಡಿರುವಿರಾ? ಹೇಳಿರಿ, ನಮ್ಮಯ್ಯನ ಸುದ್ದಿಯನ್ನಿಷ್ಟು ಹೇಳಿರಿ. ಅಷ್ಟು ಮಾಡಿದರೆ, ನಮ್ಮ ಹೊಲದೊಳಗೆ ಬಂದು ನವಣೆಯ ಕಾಳುಗಳನ್ನು ತಿನ್ನುವಿರಂತೆ! (ಕಿವಿಗೊಟ್ಟು) ಹಕ್ಕಿಗಳೇ ಏನನ್ನುವಿರಿ? ನನ್ನ ಮಾತನ್ನು ಕಿವಿಯಲ್ಲಿ ಹಾಕಿಕೊಳ್ಳುವದಿಲ್ಲವೇ? ಅಗೋ ಅಲ್ಲಿ ಬಹು ಎತ್ತರವಾದ ಮರವೊಂದಿದೆ! ಅದನ್ನಿಷ್ಟು ಕೇಳಿ ನೋಡುತ್ತೇನೆ, ನನ್ನ ಗುರುವಿನ ಸಮಾಚಾರವನ್ನು! [ಮರದ ಬಳಿಹೋಗಿ] ಓ ಮರವೇ, ಮುಗಿಲ ತನಕ ನೀನಿರುವಿ, ನಿನ್ನ ಮೈತುಂಬಾ ಕಣ್ಣುಗಳಿವೆ. ನನ್ನ ಗುರುದೇ

ವನನ್ನು ಎಲ್ಲಾದರೂ ಕಂಡಿರುವಿಯಾ? ಮೈತುಂಬ ಭಸ್ಮಲೇಪಿತನಾದ ನನ್ನ ಗುರುವು, ಬೂದಿಮುಚ್ಚಿದ ಇಂಗಳದಂತಿದ್ದಾನೆ; ಆದರೆ ಒಡಲುರಿಯಿಂದ ಕಂದಿದ್ದಾನೆ. ಕೊರಳಲ್ಲಿ—ಕೈಗಳಲ್ಲಿ ರುದ್ರಾಕ್ಷಿ ಸರಗಳು ಅಚ್ಚುಕಟ್ಟಾಗಿದ್ದದ್ದು, ಈಗ ಏನೋ ತಾಪದಿಂದ ಅಸ್ತವ್ಯಸ್ತವಾಗಿರಬೇಕು! ಇಂಥಾ "ನನ್ನೊಡೆಯನು ನಿನ್ನ ಕೋಟಿಕಣ್ಣಿಗೆ ಕಾಣಿಸಲಿಲ್ಲವೇ? ಅಗೋ ನಾರದನಂತೆ ಲೋಕ ಸಂಚಾರಿಯಾದ ವಾಯುದೇವನು, ಓಡುತ್ತ ಬಂದನು. ಆತನೇನಾದರೂ ಸುದ್ದಿ ತಂದಿದ್ದಾನೇನು? ವಾಯುದೇವಾ, ನನ್ನೊಡೆಯನನ್ನು ಕಂಡೆಯಾ? ಕಂಡಿದ್ದರೆ, ಆ ಆನಂದದ ಸುದ್ದಿಯನ್ನು ಏಕೆ ಹೇಳಲೊಲ್ಲೆ? ಹೇಳು ಹೇಳು, ಮುಚ್ಚಿಟ್ಟುಕೊಳ್ಳಬೇಡ, ನಿನಗೆ ಮಲ್ಲಿಗೆಸಂಪಿಗೆಗಳ ತೋಟವನ್ನು ರಚಿಸಿ ಕೊಡುವೆ, ನೀನಲ್ಲಿ ವಿಹರಿಸುವಿಯಂತೆ? ನಿನಗೂ ಗೊತ್ತಿಲ್ಲವೇ ನನ್ನಯ್ಯನ ಸುದ್ದಿಯು? [ಮೇಲ್ನೋಡಿ] ಸೂರ್ಯದೇವಾ, ಲೋಕದ ಕಣ್ಣು ನೀನು; ನೀನಾದರೂ ಹೇಳು! [ಮುನ್ನೋಡಿ] ಅಲ್ಲಿ ಯಾರೋ ಬರುತ್ತಿದ್ದಾರೆ. ಅವರನ್ನಿಷ್ಟು ಕೇಳೋಣ; ಅಪ್ಪಾ-ನೀನೆಲ್ಲಿಂದ ಬಂದಿ? ನನ್ನ ಗುರುವನ್ನು ಕಂಡೆಯಾ? ಅಯ್ಯೋ, ಯಾರೂ ಇಲ್ಲವಲ್ಲ? ನಾನಾರಿಗೆ ಕೇಳಿದೆನೋ, ಅವನು ಮಾಯವಾಗಿಯೇ ಹೋದನಲ್ಲ? ಇರಲಿ. ಇಷ್ಟರಲ್ಲಿ ಗುರುದೇವನು, ಇದೇ ಹಾದಿಯಿಂದ ಹಾದು ಹೋದಾನು. ಗಳಿಗೆ ಇಲ್ಲೇ ಕುಳ್ಳಿರಬೇಕು. [ಕುಳ್ಳಿರುವನು.]

**ಪದ—ಧಾಟಿ—'ಪಾಹಿಕಾಳಿಕರಾಳಿಕ ಪಾಲಿನಿ'**

**ಗುರುದೇವನು ಬರುವನೀದಾರಿಯೊಳ್ ‖ಪ‖**
**ಗಾಳಿಯನೇರಿ, ಒಲುಮೆಯ ತೋರಿ,**
**ಬಾಲನ ರಮಿಸಲು, ವೇಗದೊಳ್ ‖೧‖**

**ಒಡಲುರಿ ಶಾಂತಿಸಿ, ಗಡಗಡಿಯಿಡುತ ।**
**ಕಡುಮಮತೆಯ ಈ ಬಾಲನೊಳ್ ‖೨‖**

ಓಹೋ ಇನ್ನೂ ಬರಲೇ ಇಲ್ಲವಲ್ಲ! ಛೇ, ಛೇ, ಹೀಗೆ ಹೇಗೆ ಬಂದಾನು? ನನ್ನದೇ ಹುಚ್ಚುತನ! ಗುರುವೇ ನೀನೆಲ್ಲಿ ಹೋದೆ? ಮನೆಯಿಂದ ಬರಲಿಕ್ಕೆ ನನಗೆ ತಡವಾಯಿತೇ? (ಅಳುತ್ತ) ಈ ಪಾಪಿಯು ಮುಟ್ಟಿದ ಅನ್ನವನ್ನುಣ್ಣಲೇ ಬಾರದೆಂದೆಯಾ? ಈ ಪಾಪಿಯ ಮೋರೆಯನ್ನು ನೋಡಲಾರೆನೆಂದುಕೊಂಡಿಯಾ? ಗುರುವೇ, ಈ ಪಾಪಿ ಮುಟ್ಟಿದ ಕಾಳುತಿಂದ ನಿನ್ನ ಒಡಲುರಿಯು ನಿನ್ನನ್ನೆಷ್ಟು ಬಾಧಿಸಿರಬಹುದಲ್ಲ? ಆ ತಾಪಕ್ಕಾಗಿ ಅಡವಿಯಲ್ಲಿ ಜೀವವನ್ನೇ ಕಳೆದುಕೊಂಡೆಯಾ? (ಬಿದ್ದು ಹೊರಳಾಡುತ್ತ) ಏನು ಹೀನ ಜನ್ಮ ನನ್ನದು! ಗುರುವನ್ನು ಕೊಂದ ಖೋಡಿ ಜನ್ಮವೇ ನಿನಗೆ ಧಿಕ್ಕಾರವಿರಲಿ! ಸಾವಿರಸಾರೆ ಧಿಕ್ಕಾರವಿರಲಿ! ಸಿದ್ಧ್ಯಾ, ನಿನ್ನ ಜನುಮವನ್ನು ನಾಯಿಗೆ ಹಾಕು! ಇಂಥ ಶತಕೀರ್ತಿಮಾಡಿ, ಈ ಲೋಕದಲ್ಲಿ ಮೋರೆಯೆತ್ತಿ, ತಿರುಗುವಿಯಾ? ಈಗಲೇ ಸತ್ತು, ಹದ್ದುಕಾಗೆಗಳಿಗೆ ಆಹಾರವೇಕಾಗಲೊಲ್ಲಿ? ಛೀ, ನಿನ್ನ ಹಾಳು ಜನ್ಮವೇ? (ಅಳುತ್ತ ಬೀಳುವನು.)

ತೆರೆಯಲ್ಲಿ—ಹಾಲಗಿರಿ ಮೇಲಗಿರಿ ಮ್ಹಾತ್ಮಲ್ಲಯ್ಯಾ —ಘೇ!

ಸಿದ್ಧ:—(ಗಾಬರಿಯಿಂದ ಎದ್ದು ಕುಳಿತು ಕಿವಿಗೊಟ್ಟು) ಏನೋ ಧ್ವನಿಯು ಕೇಳಿಸುತ್ತದಲ್ಲ! ಗುರು ದೇವನೇ ಬಂದಿರಬೇಕು. ಮಲ್ಲೇಶಾ, ಗುರುವೇ—ಛೇ ಅವನೆಲ್ಲಿಂದ ಬಂದಾನು.?

ತೆರೆಯಲ್ಲಿ:—(ಘೇ ಘೇ ಎಂಬ ಉಗ್ಗಡಣೆ ನಡೆದೇ ಇದೆ.)

ಸಿದ್ಧ:—(ಕೇಳಿ) ಬಹು ಜನರ ಧ್ವನಿಯಿದೆ. ಮುಂದಕ್ಕಾದರೂ ಓಡಿಹೋಗಿ ನೋಡೋಣ. (ದಿಬ್ಬಹತ್ತಿನೋಡಿ) ಆಹ್ಹ, ಆ ಜನ ಜಾತ್ರೆಯಲ್ಲಿ ನನ್ನ ಗುರುದೇವನು, ನಿಶ್ಚಯವಾಗಿ ಇದ್ದಾನೆ; ಅತ್ತಲೇ ಜಿಗಿಯುತ್ತೇನೆ. [ಹೋಗುವನು.]

[ಯಾತ್ರಿಕರಾದ ಚೆನ್ನದೇವ, ನೀಲಾಂಬೆ, ಪಾರ್ವತಿ, ಕಲ್ಯಾಣಿ, ಪರಬು ಮೊದಲಾದವರು ಉಗ್ಗಡಿಸುತ್ತ ಪ್ರವೇಶಿಸುವರು.]

ಪರಬುಃ— ಶೆಟ್ಟರೆ, ಬಿಸಿಲಾಯಿತು. ಪಯಾಣ ಇಲ್ಲಿಗೇ ಮುಗಿಸಿರಿ.

ಚೆನ್ನದೇವಃ— ಸರಿ. ಹಾಗೇ ಮಾಡೋಣ. ಕಲ್ಲ್ಯಾಣೀ, ಮುಂದೆ ಓಡಿ, ಗಾಡಿಗಳನ್ನು ಆ ಮರದ ನೆರಳಿಗೆ ಬಿಡುವಂತೆ ವ್ಯವಸ್ಥೆ ಮಾಡು.

ಕಲ್ಲ್ಯಾಣಿಃ—ಹೊರಟೆ [ ಹೋಗುವನು. ]

ಪಾರ್ವತಿಃ—ಅವ್ವಾ, ಶ್ರೀಶೈಲವು ಇನ್ನೂ ಎಷ್ಟು ದೂರ ?

ನೀಲಾಂಬೆಃ— ಇನ್ನೇನಿಲ್ಲ, ಒಂದೆರಡು ಪಯಣಗಳಲ್ಲಿಯೇ ಬಂತು !

ಪಾರ್ವಃ—ನಮ್ಮ ಕಡೆಗೆ ಇಂಥಾ ಗುಡ್ಡ, ಅರಣ್ಯ ಒಂದೂ ಇಲ್ಲ.

ನೀಲಾಃ—ಇಲ್ಲಿಯ ಜನರು ಬಲುಗಟ್ಟಿಗರು! ಇಂಥಲ್ಲಿ ಹೇಗೆ ಬಾಳ್ವೆ ಮಾಡಿಕೊಂಡಿರುತ್ತಾರೋ ಏನೋ !

ಚೆನ್ನಃ—ಹೇಗಂದರೇನು ? ನಮ್ಮಂತೆ! ಯಾಕೆ ಪ್ರಭಯ್ಯನವರೇ!

ಪ್ರಭುಃ—ಓಹೋ ಆದರಲ್ಲೇನು ?

ಪಾರ್ವಃ— [ಆಶ್ಚರ್ಯತೆಯಿಂದ] ಓಹೋ ಅದರಲ್ಲೇನು? ಹೀಗೆ ನೀರಮೇಲೆ ಚಲ್ಲಾಟವಾದಂತೆ ಮಾತಾಡಹತ್ತಿದರೆ ಹೇಗೆ ಸ್ವಾಮಿ?

ನೀಲಾಃ—ತಂಗೀ ಹಾಗನ್ನಬಾರದು, ಸ್ವಾಮಿಗಳಿಗೆ! 'ಹಾಲು ಮೊಸರು' ಅನ್ನು !

ಪಾರ್ವತಿಃ— ಹಾಲುಮೊಸರು, ಅನ್ನ-ಕಡಬು....... (ಎಲ್ಲರೂ ನಗುವರು.)

ಚೆನ್ನಃ— ಸ್ವಾಮಿಗಳೇ, ಈವೊತ್ತು ಗಣಂಗಳು ಯಾವ ಭೋಜನವನ್ನು ಬಯಸುತ್ತಾರೆ! ಬೇಗನೆ ತಿಳಿಸಿರಿ. ಪಾಯಸ-ಕರಿಗಡಬು-ಖೀರು....

ಶರಃ—ಛೀ ಛೀ ಛೀ, ಇವು ಯಾವವೂ ಬೇಡ. ಬಾಯಿ ಕಟ್ಟಿಹೋಗಿದೆ. ಇಂದು ಬರೀ, ಸಜ್ಜೆಯರೊಟ್ಟಿ, ಕೆನೆಮೊಸರು ಸಜ್ಜಾಗಲಿ!

ಚೆನ್ನಃ—ಯಾವುದಕ್ಕೂ ಸೈ.

ಪಾರ್ವಃ—ಅವ್ವಾ, ಅದೋ ಯಾವನೋ ಹುಡುಗನು ಓಡುತ್ತಲೇ ಬರುತ್ತಿದ್ದಾನೆ.

ನೀಲಾಃ—ಹೌದು. ಯಾವನಾದರೂ ಪರಸಿಯುವನಿರಬೇಕು; ಇತ್ತಲೇ ಬಂದನು.

ಚೆನ್ನಃ—ಈ ಹುಡುಗನು ಇಷ್ಟೇಕೆ ಧಾವಿಸುತ್ತ ಬರುತ್ತಿದ್ದಾನೆ?

ಪ್ರಭುಃ—ಅರಣ್ಯದಲ್ಲಿ ಒಬ್ಬನೇ ಸಿಕ್ಕು ಬಿದ್ದು, ಅಂಜಿಕೆಯಿಂದ, ಓಡುತ್ತಿದ್ದಾನು.

ಸಿದ್ಧಃ—[ಪ್ರವೇಶಿಸಿ ಎಲ್ಲರ ಮುಖವನ್ನೂ ನೋಡಹತ್ತುವನು]

ಪಾರ್ವಃ—ಅವ್ವಾ, ನೋಡೇ ಈತನ ಕಾಲೆಲ್ಲ ನೆತ್ತರವಾಗಿದೆ.

ನೀಲಾಃ—ಹೌದು. ಮೈಯೆಲ್ಲ ಬರಚಿದೆ; ಏನಾಗಿರಬೇಕು?

ಚೆನ್ನಃ—ಹುಡುಗನು, ಗಾಬರಿ ಬೇರೆ ಆಗಿದ್ದಾನೆ. ಯಾರನ್ನೋ ತಪ್ಪಿಸಿಕೊಂಡಿದ್ದಾನೆಂದು ಕಾಣುತ್ತದೆ. ಕಾಲಲ್ಲೇನೂ ಇಲ್ಲ; ಕಿಚ್ಚು ಬರುಕಿದಂತೆ ಬಿಸಿಲು ಬೇರೆ, ಸುರಿಯುತ್ತದೆ.

ನೀಲಾಃ—ತಮ್ಮಾ ನೀನ್ಯಾರು? ಇಷ್ಟೇಕೆ ಹೆದರಿರುವಿ ಏನಾಯ್ತು?

ಪಾರ್ವಃ—ಯಾರನ್ನಾದರೂ ಕಳಕೊಂಡಿರುವೆಯಾ ?

ಸಿದ್ಧಃ—(ಮನದಲ್ಲಿ) ಆಯ್ಯಯ್ಯೋ! ಇಲ್ಲಿಯೂ ಇಲ್ಲವಲ್ಲಾ!!

ಪಾರ್ವ:—ಅಪ್ಪಾ, ಎಳೆಕಾಲುಗಳು ಬಿಸಿಲಲ್ಲಿ ಹುರುಪುಳಿಸಿ, ಗುಳ್ಳೆಗಳು ಎದ್ದಿವೆ ನೋಡೇ? ಅಂಥಾ ಗುಳ್ಳೆಗಳಿಗೆ ಮುಳ್ಳುಬೇರೆ ಚುಚ್ಚಿಕೊಂಡಿವೆ.

ನೀಲಾ:—ಹೌದು! ಎಳೇ ಕಂದಮ್ಮ ಇನ್ನೂ! ಇಂಥಾ ಧ್ರುವನ ವನವಾಸವು, ಏಕೆ ಬಂದದೆಯೋ ಯಾರಿಗೆ ಗೊತ್ತು?

ಚೆನ್ನ:—ಮಾತಾಡಿಸಿದರೆ ಮಾತನ್ನೂ ಆಡಲೊಲ್ಲನು; ನಮ್ಮ ಮಾತುಗಳಾದರೂ ತಿಳಿಯುತ್ತವೆಯೋ ಇಲ್ಲವೋ?

ಪರ:— ನಮ್ಮ ಮಾತು ತಿಳಿಯೋದಿಲ್ಲೆಂದರೆ, ನಗೆಗೆಡೆಯಾದ ಮಾತು! ನಮ್ಮ ರಾಜ್ಯದ ಜನರಿಗೆ ನಮ್ಮ ಮಾತು ಬರೋದಿಲ್ಲವೇ? ಹುಡುಗನು ಮುಕನಿದ್ದಾನು!

ಸಿದ್ಧ:—(ಮನ) ಅಯ್ಯೋ ನನ್ನಯ್ಯನು ಇಲ್ಲಿಯೂ ಇಲ್ಲವಲ್ಲ! (ಅಳುತ್ತ) ದೇವರೇ, ನಾನು ನಿನ್ನಲ್ಲಿ ಇದೇ ಬೇಡಿ ಬಂದಿದ್ದೆನೇ? ನನ ಗುರುದೇವನೆಲ್ಲಿದ್ದಾನೆ? (ನೆಲಕ್ಕೆ ಬಿದ್ದು ಹೊರಳಾಡಿ ಅಳುತ್ತ) ಅಯ್ಯೋ-ಗುರುವೇ—ಗುರುದೇವಾ?

ಚೆನ್ನ:—(ಗಾಬರಿ) ಅಯ್ಯಯ್ಯೋ ಇದೇನು ಗೋಳು! ಓಡುತ್ತ ಬಂದ ಹುಡುಗನು, ಒಮ್ಮಿಂದೊಮ್ಮೆ ನೆಲಕ್ಕುರುಳಿ ಅಳಹತ್ತಿದನಲ್ಲ!

ನೀಲಾ:—ಹೂವಿನಂಥ ಹುಡುಗ; ಬೆಂಕಿಯಂಥ ಬಿಸಿಲಲ್ಲಿ ಹೊರಳಾಡಹತ್ತಿದನಲ್ಲ!

ಚೆನ್ನ:—ಹುಡುಗನು ಒಳ್ಳೆ ಸಲ್ಲಕ್ಷಣನಾಗಿದ್ದಾನೆ: ಯಾರೋ ಶ್ರೀಮಂತ ಮಗನಿದ್ದಾನು? ತಮ್ಮಾ, ಯಾಕೆ ಅಳುತ್ತೀ—ಯಾರನ್ನು ಕಳಕೊಂಡೆ? ನೀಲಾಂಬೇ, ಈತನು ನನ್ನೊಡನೆ ಮಾತಾಡನು. ನೀನಾದರೂ ಮಾತಾಡಿಸಿ ನೋಡು!

ನೀಲಾ:—ಮಗೂ, ಸುಮ್ಮನಾಗು. ನಿನಗೇನಾಗಿದೆ, ಯಾರನ್ನು ಕಳಕೊಂಡಿರುವೆ?

ಪಾರ್ವ:- ಹಸಿವೆ ಆಗಿದೆಯೋ ಆಗಿದ್ದರೆ, ಈಗಲೇ ನಿನಗೆ ಹಾಲುಂಡೆ ಕೊಡುವೆನು.

ನೀಲಾ:—ಅಯ್ಯಯ್ಯೋ ಮತ್ತಿಷ್ಟು ಅಳಹತ್ತಿದನಲ್ಲ ! ತಮ್ಮಾ ಅಳಬೇಡ. (ಎತ್ತುತ್ತ) ಏನಾಗಿದೆ ತಿಳಿಸು; ಯಾರಾದರೂ ಹೊಡೆದರೇ? ಯಾರು ಹೊಡೆದಿದ್ದಾರು, ಇಷ್ಟು ಪರಿಗಾಯವಾಗುವಂತೆ !

ಪಾರ್ವ:—ಅಂತೇ, ಹೇಳಲಿಕ್ಕೆ ಮಾತು ಸಹ ಬರಲೊಲ್ಲವು ನೋಡೇ ಬಾಯಿಂದ! ಕುತ್ತಿಗೆಯ ಶಿರಗಳು ಬಿಗಿದಿವೆ; ಕಣ್ಣೀರು ಹಾಗೇ ಸೆಲೆಯಾಗಿ ಹರಿಯಹತ್ತಿದೆ.

ನೀಲಾ:—(ತೊಡೆಯ ಮೇಲೆ ಮಲಗಿಸಿಕೊಂಡು) ಹೇಳು, ಹೇಳು. ನಿಮ್ಮಪ್ಪನನ್ನು ಕಳೆದುಕೊಂಡಿದ್ದೀಯಾ ? (ತಪ್ಪಡಿಸುವಳು.)

ಸಿದ್ಧ:—ಇಲ್ಲ-ನನ್ನ ದೇವನು...... [ಬಿಕ್ಕುತ್ತ] ನನ್ನನ್ನು ತಪ್ಪಿಸಿ ಹೋಗಿದ್ದಾನೆ.

ನೀಲಾ:—ಕೇಳಿದಿರಾ?,

ಚೆನ್ನ:— [ಆಶ್ಚರ್ಯ] ಬಲು ಜಾಣಹುಡುಗ !

ಪರ:- ತಮ್ಮಾ, ನಿನ್ನ ಗುರು ಯಾರು, ಎಲ್ಲಿಯವರು ?

ಸಿದ್ಧ:—ನನ್ನ ಗುರುವಿನ ಹೆಸರು ಮಲ್ಲೇಶ; ಶ್ರೀಶೈಲದಲ್ಲಿರುತ್ತಾನಂತೆ!

ಪರ:—ಇಷ್ಟೇಕೆ ಅಳುವುದು? ನಿನ್ನ ಗುರುವು ತನ್ನ ಸ್ಥಳಕ್ಕೆ ಹೋಗಿದ್ದಾನು.

ಸಿದ್ಧ:—ಆತನ ಸ್ಥಳವು ಯಾವ ನಿಟ್ಟಿಗಿದೆ?

ಚೆನ್ನ:—ನಾವೂ ಶ್ರೀಶೈಲಕ್ಕೇ ಹೊರಟಿರುವೆವು; ನಮ್ಮೊಡನೆ ಬಂದರೆ, ನಿನ್ನ ಗುರುವನ್ನು ನಿನಗೆ ತೋರಿಸುತ್ತೇವೆ.

ಸಿದ್ಧ:—ಹಾ ಹಾ ಹಾ!!! ಹಾಗಾದರೆ ಕರೆದುಕೊಂಡು ಹೋಗಿರಿ ಬರುತ್ತೇನೆ.

ಪದ—ಧಾಟಿ—‘ ಈ ಘನ ಪ್ರೇಮಕೆ ನಾ’

ಮರೆಯೆನು ನಾನುಪಕಾರವನೆಂದು ॥ಪ॥

ಭ್ರಮಿಸುವ ಭ್ರಮರಕೆ, ಸುಮವನು ತೋರಿದ।
ತಮದೊಳನಾಥಗೆ, ಕರವನು ನೀಡಿದ ॥೧॥

ಕಳುಹಿದ ನಿಮ್ಮನು ಆ ಗುರುದೇವನು।

ಬೆಳೆಸಲಿನ್ನು ಸದ್ಭಕ್ತಿಯಲತೆಯನು ॥೨॥

ಚೆನ್ನಾ:—ನೀಲಾಂಬೇ, ಈ ಎಳೆ ಮಗುವಿನ ಸಾತ್ವಿಕ ಗುಣವನ್ನು ಕಂಡು, ನನಗೆ ನಾಚಿಕೆ ಬರುತ್ತಲಿದೆ.

ನೀಲಾ:— ಇಂಥ ಸದ್ಗುಣಮಣಿಯು, ಯಾವ ಕಣಿಯಲ್ಲಿ ಜನ್ಮಿಸಿತೋ! ಬಾ ಮಗೂ, ನಿನ್ನ ಮುದ್ದು ಮುಖವು ಕಳೆಗುಂದಿದೆ; ತೊಳೆಯುತ್ತೇನೆ, ಬಾ ನನ್ನ ಹತ್ತಿರ!

ಪರ:—ಶೆಟ್ಟರೇ, ನಾನು ಶ್ರೀಶೈಲ ಮಾಡಹತ್ತಿ, ಈ ಸಲಕೂಡಿಸಿ ಹಡಿನೇಳು ಸಲವಾಯಿತು. ಮಲ್ಲೇಶನ ಸಲುವಾಗಿಯೇ ಹೋಗುತ್ತೇವೆಯಾದರೂ ಈ ಕಂದನಷ್ಟು ಹಂಬಲ ನಮಗಿಲ್ಲ. ನಮ್ಮ ಹದಿನೇಳು ಸಲದಯಾತ್ರೆಯ ಫಲವನ್ನು, ಈತನ ಹಂಬಲದಿಂದೊಪಗುವ ಪುಣ್ಯದ ಮುಂದೆ ಧೂಪಹಾಕಬೇಕು.

ಚೆನ್ನಾ:—ಇಂಥ ಹಂಬಲವಿದ್ದರೆ, ಯಾವ ಯಾತ್ರೆಯು ಅವಶ್ಯಕತೆಯೇ ತೋರುವದಿಲ್ಲ. ಭಲೆ, ಭಲೆ, ಹುಡುಗಾ! ಇದೆಲ್ಲಾ ಆ ಪರಮಾತ್ಮನ ಲೀಲೆಯೇ ತೋರುತ್ತದೆ, ನಮ್ಮ ಆಡಂಬರ ಭಕ್ತಿಯ ಗರ್ವ ಖಂಡನಕ್ಕಾಗಿ, ಪರಮಾತ್ಮನು ಎಸೆದ ಬಾಣವಿದು! [ ಹೋಗುವನು ]



# ತೃತೀಯ-ಪ್ರವೇಶ.

(ಮನೆಯಲ್ಲಿ ಸುಗ್ಗಲೆಯು.)

ಸುಗ್ಗಲೆ:—

ಪದ—ಧಾಟಿ— 'ಪ್ರೇಮಪುತ್ರಿಯೆನ್ನ ಮನಕೆ'

ಬಾರನೇಕೆ ಸಿದ್ಧವೀರ।
ತೋರನೇಕೆ ಮುಖವಧೀರ ॥ ಪ ॥

ಹಸುಗಳೆಲ್ಲ ತೊಳಲಿಸುವವೋ।
ಕೊಸರಿ, ಯಾವನ ಬಳಲಿಸುವವೋ॥
ನಸುಕ ಮೋಡಿಗೆ, ಮೋಸ ಹೋದನೋ।
ಮುಸುಳಿ ಶಶಿಯು, ದೇಕೆ ಬಾರನೋ॥ ೧ ॥

ನನ್ನ ಸಿದ್ದಯ್ಯನು ಇನ್ನೂ ಏಕೆ ಬರಲಿಕ್ಕಿಲ್ಲ? ನಸುಕಾಯಿತು? ಮಧ್ಯಾಹ್ನಕ್ಕೆ ಬಂದು ಹೋದಾಗಿನಿಂದ ಅವನನ್ನು ಅಪ್ಪಿಕೊಂಡು, ಮುದ್ದಿಡುವ ಆಶೆಯು ಪ್ರಬಲವಾಗಿದೆ; ಹಾದಿ ತಪ್ಪಿರಲಿಕ್ಕಿಲ್ಲವಷ್ಟೇ? ಹಸುಗಳು ಕಾಡುತ್ತ ಆತನನ್ನು ತೊಳಲಿಸಿರಲಿಕ್ಕಿಲ್ಲವಷ್ಟೇ? ಮಧ್ಯಾಹ್ನದಲ್ಲಿ ಬಂದಾಗ ಮಾತಾಡಿದಂಥ, ಸವಿಸಕ್ಕರೆಯ ಮಾತುಗಳನ್ನು ನನ್ನ ಕಿವಿಗೆ ಮತ್ತೊಮ್ಮೆ ಉಣ್ಣಿಸಿಯಾನೆಂದು ಹಸಗೊಂಡು ಕುಳಿತಿರುವೆ.

ತೆರೆಯಲ್ಲಿ:— 'ಅಂಬಾ; ಅಂಬಾ'

ಸುಗ್ಗಲೆ:— (ತಟ್ಟನೆ) ಬಂದ, ನನ್ನ ಗೋಪಾಲ ಬಂದ. (ಬಾಗಿಲಿಗೆ ಬರುವಳು) ಭೀಮಾ, ಹನುಮಾ, ಸಿದ್ಧಣ್ಣನೆಲ್ಲಿದ್ದಾನೆ? ಅವನೇಕೆ ಬರಲಿಲ್ಲ?

ಹನು:— ಅವ್ವಾ, ಅದೆಲ್ಲ ನಮಗೇನು ಗೊತ್ತು!

ಸೋಮು:—ಸಿದ್ದಣ್ಣ, ನಮ್ಮೊಡನೆ ಬಂದೇ ಇಲ್ಲ. ಎತ್ತ ಹೋಗಿದ್ದಾನೋ ನಾವರಿಯೆವು. ನಾವು ಹೊಲದಲ್ಲಿ ಹಾದಿ ನೋಡಿ ನೋಡಿ ಬೇಸತ್ತೆವು.

ಭೀಮು:—ಮತ್ತಾರಾವರೂ ಹೊಸಗೆಣೆಯರು ಸಿಕ್ಕಿದ್ದಾರು, ಆತ್ತ ಕಡೆಗೆ ಹೋಗಿರಬೇಕು. ಅಗೋ ನೋಡು ಆವಮ್ಮ ಬಂದೇಬಿಟ್ಟ.

ಸುಗ್ಗಿ:—(ನೋಡಿ) ಹೌದು; ಬಂದ.

ಹನು:—ಯಾಕಪ್ಪಾ, ಸಿದ್ದಪ್ಪ! ನಮ್ಮ ಗೆಳೆತನ ಬಿಟ್ಟೆಯಾ?

ಭೀಮು:—ಹಸುಗಳ ಹಿಂದೆ ಇದ್ದಾನೆ ಕಾಣುತ್ತೆ.

ಸುಗ್ಗಿ:—ಎಲ್ಲಿದ್ದಾನೆ? ಬರಿ ಹಸುಗಳೇ ಅವೆ.

ಹನು:—ಸೋಮ್ಯಾ ನಮ್ಮ ದನಗಳು ಮುಂದೆ ಹೋದವು! ನಾನು ಹೋಗುತ್ತೇನೆ.

ಸೋಮು:—ಸಿದ್ದಣ್ಣನನ್ನ ನಾಳೆ ಮಾತಾಡಿಸೋಣಂತೆ! ನಡೆಯೋ ಭೀಮಾ (ಹೋಗುವರು.)

ಸುಗ್ಗಿ:—ಯಾಕೆ ಬರಲಿಲ್ಲ ನನ್ನಣ್ಣ! ಏನಾಯಿತೋ ಯಾರು ಬಲ್ಲರು? ಮಧ್ಯಾಹ್ನಕ್ಕೆ ಬಂದವನನ್ನು, ನಾನು ಸುಮ್ಮನೆ ಹೋಗಗೊಟ್ಟೆ. ಗೆಳೆಯರ ಜತೆ ಮಾಡಿ ಕಳಿಸಿದ್ದರೆ, ಇಷ್ಟು ಹೊತ್ತಿಗೆ ನನ್ನ ಕಂದನನ್ನು ಕಂಡು ಬಿಡುತ್ತಿದ್ದೆ. ನನಗೇಕೆ ಅಂಥ ಬುದ್ಧಿ ಬರಲಿಲ್ಲ. [ಹಳಹಳಿ]

ಮುದ್ದು:—(ಬಂದು) ಸುಗ್ಗಲೇ ಹೀಗೇಕೆ ಕುಳಿತಿರುವಿಯೇ? ಸಿದ್ಧರಾಮನೆಲ್ಲಿ?

ಸುಗ್ಗಿ:—ಸಿದ್ಧರಾಮನಿನ್ನೂ ಅಡವಿಯಿಂದ ಬಂದೇ ಇಲ್ಲ!

ಮುದ್ದು:—ಬಂದೇ ಇಲ್ಲ?! ಆಗಲೇ ಹೇಳಬೇಕಿತ್ತು? ಹಸುಗಳನ್ನಾರು ತಂದರು?

ಸುಗ್ಗ:—ಅವು ತಾವೇ ಬಂದಿವೆ.

ಮುದ್ದು:—ನೀನು ಗಾಬರಿ ಆಗಬೇಡ. ನಾನೀಗಲೇ ಅವನನ್ನು ಹುಡುಕಿಕೊಂಡು ಬರುತ್ತೇನೆ.

ಸುಗ್ಗ:—ಕತ್ತಲೆ ಬೇರೆ ಆದೆ; ತವದಾಸಿಯನ್ನೊಯ್ಯಿರಿ!

ಮುದ್ದು:—ಹಾಗೆ ಮಾಡುತ್ತೇನೆ. ( ಹೋಗುವನು )

---

## ಚತುರ್ಥ-ಪ್ರವೇಶ.

---

[ಬೀದಿಯಲ್ಲಿ ವಿಶ್ವಾಸ-ವಿನಾಯಕರಾಯರು]

ವಿಶ್ವಾಸ:—(ವಿನಾಯಕನ ಕೈಹಿಡಿತಂದು) ನಿನಗೊಂದು ಗೌಪ್ಯವಾದ ಸಂತೋಷದ ಸಂಗತಿಯೊಂದು ಹೇಳಬೇಕಾಗಿದೆ.

ವಿನಾ:—(ಕಿವಿಗೊಟ್ಟು) ಅದಾವ ಸಂಗತಿ? ಗೌಪ್ಯವಾದದ್ದಿದ್ದರೆ ಕಿವಿಯಲ್ಲಿ ಹೇಳು.

ವಿಶ್ವಾ:—ಯಾರ ಮುಂದೆಯೂ ಒಡೆಯಬಾರದು!

ವಿನಾ:—ಛೀ, ಛೀ, ವಚನ ತೆಗೆದುಕೊಳ್ಳಿ ಬೇಕಾದರೆ!

ವಿಶ್ವಾ:—ಬೇಡ. ವಚನ ತೆಗೆದುಕೊಳ್ಳುವ ಅವಶ್ಯಕತೆಯೇನಿಲ್ಲ; ನಿಮ್ಮಂಥವರ ಮೇಲೆ ಅಷ್ಟು ವಿಶ್ವಾಸವಿಡದಿದ್ದರೆ, ಮುಂದೆ ಹೇಗೆ?

ವಿನಾ:—ಹೇಳಿರಿ, ಯಾವ ಸಂಗತಿ?

ವಿಶ್ವಾ:—(ಹಿಂದೆ ಮುಂದೆ ನೋಡಿ) ಆ ಒಕ್ಕಲಿಗನ ಮಗ ನನ್ನ— ಮಾಯ ಮಾಡಿಸಿ ಬಿಟ್ಟೆನಲ್ಲ!

ವಿನಾ:— (ಆನಂದ) ಹೇಗೋ? ಸತ್ಯವಾಗಿಯೇ?

ವಿಶ್ವಾ:— ಬ್ರಾಹ್ಮಣನಾದ ನಾನು ಅಸತ್ಯವನ್ನೆಂದಾದರೂ ಆಡಿಯೇನೆ? ಊರೊಳಗೆ ದೊಡ್ಡ ಗೊಂದಲವೆದ್ದಿದೆ ಕೇಳಿಲ್ಲವೇ?

ವಿನಾ:— ಮತ್ತಾವ ಗೊಂದಲ!?

ವಿಶ್ವಾ:— ಆ ಹುಡುಗನನ್ನು ಹುಡುಕುವದು! ಊರೊಳಗಿನ ಸಣ್ಣವರು, ದೊಡ್ಡವರು, ಬಡವರು ಶ್ರೀಮಂತರು, ರಾಣಿಯವರು, ವೇಶ್ಯೆಯರು ಮೊದಲು ಮಾಡಿಕೊಂಡು ಎಲ್ಲರೂ ಹೌಹಾರಿ ಹುಡುಕುತ್ತಿದ್ದಾರೆ! ಸಿಗಲೇ ಒಲ್ಲನು! (ನಗುತ್ತ) ಹೇಗೆ ಸಿಕ್ಕುವನು?

ವಿನಾ:— ಅವರೆಲ್ಲಾ ಮೂರ್ಖರೇ! ಯಾಕೆ ಹುಡುಕಲೊಲ್ಲರು!

ವಿಶ್ವಾ:— [ಹಿಗ್ಗಿನಿಂದ] ಅಂತೂ, 'ಪೀಡೆ' ಯೊಂದು ಹಾಳಾಗಿ ಹೋಯಿತಲ್ಲ!

ವಿನಾ:— ಅವನ ಕೊಲೆಯನ್ನೇ ಮಾಡಿಸಿದಿರಾ? 'ಬಾಲಹತ್ಯ'ದ ದೋಷವನ್ನು ಕಾಲಿಂದ ಒರಿಸಿ ಬಿಟ್ಟಿರಾ?

ವಿಶ್ವಾ:— ಸಂಶಯಕ್ಕೆ ಯಾವ ಆಸ್ಪದವೂ ಇಲ್ಲ! ಅದರ ಇತಿಹಾಸವನ್ನು ಆಮೂಲಾಗ್ರವಾಗಿ ಹೇಳುತ್ತೇನಂತೆ! ಈಗ ಬೇಡ.

ವಿನಾ:— ಸಂಕ್ಷಿಪ್ತವಾದರೂ ತಿಳಿದಂತಾಯ್ತು. ನೀವು ಜನ್ಮಿಸಿದ್ದಕ್ಕೆ ಇದೊಂದು ಬಗೆಯ ಸಾರ್ಥಕ್ಯವಾದರೂ ಆಯ್ತಲ್ಲೇ?

ವಿಶ್ವಾ:— ಹಾಗನ್ನಬೇಡಿ, ನನಗಿನ್ನೂ ಅಷ್ಟು ಯೋಗ್ಯತೆ ಬಂದಿಲ್ಲ.

ವಿನಾ:— ನಮಗೇನು ಹಾಗನಿಸುವದಿಲ್ಲ; ಸಮಾಜದ ಕಾಲ್ತೊಡಕಾಗ ಬಹುದಾದ ಲತೆಯೊಂದನ್ನು ಎಳೆಯದಿರುವಾಗಲೇ ಚಿವುಟಿದ್ದು, ಸತ್ಕಾರ್ಯವೇ!

ವಿಶ್ವಾ:— ಹೀಗೆ ಜತೆಯಾಗಿ ನಿಂತು ಸಂಭಾಷಿಸುವುದೂ, ಸಂಶಯಾಸ್ಪದವೇ ಸರಿ. ಹೋಗೋಣ. (ಹೋಗುವರು.)

---

# ಪಂಚಮ-ಪ್ರವೇಶ.

[ಅಡವಿಯಲ್ಲಿ ಸುಗ್ಗಲೆಯ ಪ್ರವೇಶ.]

ಸುಗ್ಗಲೆಃ—(ದುಃಖದಿಂದ) ಎಲ್ಲಿ ಹುಡುಕಲಿ? ನನ್ನ ಗಿಳಿಯನ್ನು ಎಲ್ಲಿ ಹುಡುಕಲಿ? ನನ್ನ ಕಂದನು, ಹಸುಗಳೊಡನೆ ಆಡುವ ಸ್ಥಳವು ಇದೇ ಅಲ್ಲವೇ? ಕಂದಾ, ನಿನ್ನ ಹಸುಗಳನ್ನು—ಪ್ರೀತಿಯ ಕರುಗಳನ್ನು ಬಿಟ್ಟು ಎಲ್ಲಿ ಹೋದೆ? ಅಯ್ಯಯ್ಯೋ ನಿನ್ನನ್ನು ನಾನು ಹೇಗೆ ಕಂಡೇನು? ಸಿದ್ಧಾ, ಸಿದ್ಧರಾಮಾ, ನೀನು ಜೀವಂತನಾದರೂ ಇರುವಿಯಾ? ಏನು ಮಾಡಿದರೆ ನನ್ನ ಜೀವ-ರಾಜನು ನನಗೆ ಸಿಕ್ಕಾನು? ಯಾರಿಗೆ ಕೇಳಲಿ?

ಪದ—ಧಾಟಿ— 'ಎಲ್ಲಿ ಪೋಗಲೀ ನಿನ್ನಗಲಿ'

ಏನು ಮಾಡಲಿಯರಗಿಳಿಯೇ, ಎಲ್ಲಿ ಹೋದೆ ಜೀವಾ ॥ಪ॥
ಕಾನನ ಪಕ್ಷಿಯು ಬಳಗಕೆ ಕೇಳಲ್ಯಾ, ತಾಳಲೆಂತು ಈನೋವು।

ನೆಗೆಯಲ್ಯಾ ಮುಗಿಲಿಗೆ ಜವನನು ಕೇಳಲು।
ಆಗಿಯಲ್ಯಾ ನೆಲವನ್ನಸುರರ ಸೀಳಲು॥

ಹಗಲಿನಾಣ್ಮನನು ಬಳ್ಮೆಯು ಗೆಯ್ಯಲು।
ಮುಗಿಸಲೇನು ಬಾಳ್ವೆ ॥೧॥

ಮಗುವೆ, ನನ್ನನ್ನು ಅವ್ವಾ ಎಂದು ಕೂಗಿದ್ದು, ನಿನ್ನೆ ಇದೇ ವೇಳೆಯಲ್ಲಲ್ಲವೇ? ನಿನ್ನೆ ಯಾರ ಮೋರೆ ನೋಡಿದ ಪುಣ್ಯದಿಂದ ಮಗನಿಗೆ ಬುತ್ತಿಕಟ್ಟಿ ಕೊಟ್ಟೆನೆಂದು ಹಿಗ್ಗಿದ್ದೆನಲ್ಲ! ಅಯ್ಯೋ, ಆ ಹಾಲಿನ ಏಡೆಯು, ಇಂದು ಇಂಥಾ ನಂಜು-ನಿವಾಳಿಯಾಯ್ತಲ್ಲ? ಕೂಸೇ, ನಿನ್ನ ಗೆಳೆಯರನ್ನೆಲ್ಲ ಬಿಟ್ಟುಗೊಟ್ಟು ಯಾಕೆ ಎಲ್ಲಿ ಹೋದೆ? ನೀರು ಕುಡಿಯ ಹೋಗಿ ಜಲಾಶಯದಲ್ಲಿ ಮುಳುಗಿದೆಯಾ? ಹುಲಿಯ

ಬಾಯಿಗೆ ತುತ್ತಾದೆಯಾ ? ಜೀವ ಬಿಡುವ ಕಾಲಕ್ಕೆ 'ಅವ್ವಾ-ಅವ್ವಾ' ಎಂದು ಹಲುಬಿರಬಹುದಲ್ಲ ! ? ಆ ಹುಲಿಗೆ ನಿನ್ನ ಅಳುವಿನಿಂದ ದಯಬರಲಿಲ್ಲವೇ ? ಕಂದಾ, ಮುಪ್ಪಿನ ಕಾಲಕ್ಕೆ ಗುರುರೇವಣಸಿದ್ಧೇಶ್ವರನು ಕೊಟ್ಟ ಫಲವೋ ನೀನು ! ಈ ಪಾಪಿಗಳಿಗೆ ಮರಣ ಕಾಲಕ್ಕೆ ಹೆಚ್ಚಿನ ದುಃಖವಾಗಲೆಂದು, ಇವೆಲ್ಲ ಆಟವಾಗಿ ಹೋಯಿತೇ ? ನಿನ್ನ ದೇಹವಾದರೂ ಕಣ್ಣಿಗೆ ಬೀಳಲೆಂದರೆ, ನೀನು ಮಡಿದ ರಣರಂಗವೆಲ್ಲಿದೆ ಯಾರಿಗೆ ಗೊತ್ತು ? ಅಯ್ಯಯ್ಯೋ ಹೇಗೆ ಮರೆಯಲಿ ನನ್ನ ಕಂದನನ್ನು ! ಮಗುವೇ, ನಿನ್ನ ಸುದ್ದಿಯನ್ನು ಯಾರಿಂದ ಹೇಳಿ ಕಳಿಸಿದಿ ? ನಿನ್ನ ಮಮತೆಯ ಹಸುವಿನಿಂದ ಹೇಳಿ ಕಳಿಸಿದಿಯಾ ? ಅದು ನನಗೆ ಏನೂ ಹೇಳಲಿಲ್ಲವಲ್ಲ ? [ಮುಗಿಲ ಕಡೆಗೆ ನೋಡಿ] ಕಂದಾ, ನಿನ್ನಂಥ ಹಸುಳಸಿಗೆ ಸ್ವರ್ಗದ ಬಾಗಿಲು ಹೇಗೆ ತೆರೆಯಿತು, ದೇವದೂತರು, ನಿನ್ನನ್ನು ಇದಿರುಗೊಂಡು ಕರಕೊಂಡು ಹೋದರೆ ? ಮಗೂ ನಿನಗೆ ಸ್ವರ್ಗ ಸಾಮ್ರಾಜ್ಯವೇ ಸಿಕ್ಕಿದ್ದರೆ, ಒಂದೇ ಒಂದು ಸಾರಿ ಹಣಿಕಿಹಾಕಿ, ನನಗೆ ಮೋರೆ ತೋರಿಸು. ಕಂದಯಾ?, ನನ್ನನ್ನು ಮರೆತೆಯಾ , ಕಟ್ಟಿಸಿಕೊಂಡೊಯ್ದ ಬುತ್ತಿಯು, ಸ್ವರ್ಗದ ಬುತ್ತಿಯೇ ಆಯ್ತೆ. (ನೆಲಕ್ಕೆ ಬಿದ್ದು)

ಜಂಗಃ--- [ಮನ] ಇಂಥ ಕಟ್ಟಡವಿಯಲ್ಲಿ ರೋದನವಸಿಯು ಯಾರದು?

ಸುಗ್ಗಃ—[ಬಿಸ್ಸಲ್ಲೆ ಕಂದಾ— ಸಿದ್ದರಾಮ—ಸಿದ್ಧೇಶಾ?

ಜಗಂಃ— [ನೋಡಿ] ಓಹೋ, ಈಕೆಯೇ ಆ ಸಿದ್ಧರಾಮನತಾಯಿ ಕಾಣಿಸುತ್ತಾಳೆ. ಅಮ್ಮಾ, ಅಮ್ಮಾ,

ಸುಗ್ಗಃ--[ತಟ್ಟನೆ] ಮಗೂ, ಸಿದ್ಧಾ, ಬಂದೆಯಾ? ಮೊದಲು ನನಗೊಂದು ಮುದ್ದುಕೊಡು. [ಆತುರ]

ಜಂಗಃ—ಅಮ್ಮಾ, ನಾನು ಸಿದ್ಧರಾಮನಲ್ಲ!

ಸುಗ್ಗ:--[ಅಳುತ್ತ] ಅಯ್ಯೋ--ನನ್ನ ಸಿದ್ಧಯ್ಯ-ನಿನ್ನನ್ನು ಹೇಗೆ ಕಂಡೇನೋ?

ಜಂಗ:--ಅಮ್ಮಾ, ದುಃಖಿಸಬೇಡ. ನಿಮ್ಮ ಸಿದ್ಧರಾಮನು ಸುರಕ್ಷಿತವಾಗಿದ್ದಾನೆ!

ಸುಗ್ಗ:-- ಸುರಕ್ಷಿತವಾಗಿದ್ದಾನೆ? ಎಲ್ಲಿ, ಸ್ವರ್ಗದಲ್ಲಿ ?

ಜಂಗ:--ಛೀ, ಛೀ ,ಹಾಗೇಕೆ ವ್ಯಥೆ ಪಡುತ್ತೀರಿ? ಸಿದ್ಧರಾಮನು ಯಾತ್ರಿಕರೊಡನೆ ಶ್ರೀಶೈಲಕ್ಕೆ ಹೋಗಿದ್ದಾನೆ.

ಸುಗ್ಗ:--[ಮನ] ನಾನು ಕೇಳುತ್ತಿರುವುದು, ಕನಸಿನಲ್ಲಿಯೇ? ಛೀ, ಅಲ್ಲ [ಕುರಿತು] ಸ್ವಾಮಿ, ಇದು ನಿಜವೇ? ನನ್ನ ಕೊರಳಾಣೆಯಾಗಿದೆ ಸತ್ಯವಾಗಿ ಹೇಳಿರಿ.

ಜಂಗ:--ಅಮ್ಮಾ, ಲಿಂಗ ಸಾಕ್ಷಿಯಾಗಿ ಹೇಳುತ್ತೇನೆ. ಸಿದ್ಧೇಶನು ಶ್ರೀಶೈಲಕ್ಕೆ ಹೋಗಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ.

ಸುಗ್ಗ:--ಸಣ್ಣ ಹುಡುಗನು, ಶ್ರೀಶೈಲಕ್ಕೆ ಹೇಗೆ ಹೋದನು? ಸಣ್ಣಪುಟ್ಟ ಹಾದಿಯೇ,

ಜಂಗ:--ಸಿದ್ಧರಾಮನನ್ನು ಹಾದಿಯಲ್ಲಿ ನಾನು ಚೆನ್ನಾಗಿ ಪರೀಕ್ಷಿಸಿರುವೆ. ವಯಸ್ಸು ಚಿಕ್ಕದಾದರೂ ಬಲು ವಿವೇಕಶಾಲಿಯಾಗಿದ್ದಾನೆ; ಆತನು, ಮಲ್ಲಿಕಾರ್ಜುನನ ದರ್ಶನಕ್ಕೆಂದು ಹಂಬಲಿಸುತ್ತಿದ್ದುದನ್ನು ಕೇಳಿ--ಕಂಡು ಚೆನ್ನದೇವನೆಂಬ ಸಾವಕಾರನು ತನ್ನ ಪರಿಸಿಯುವರೊಡನೆ ಶ್ರೀಶೈಲಕ್ಕೆ ಕರಕೊಂಡು ಹೋದನು; ಅವನನ್ನೇ ಹುಡುಕುತ್ತಿರುವ ನಿಮಗೆ ಈ ಸಂಗತಿಯನ್ನು ಹೇಳಲೇ ಬೇಕಿತ್ತು.

ಸುಗ್ಗ:--'(ಹಿಗ್ಗಿ,) ನನ್ನಯ್ಯಾ, ನಿನ್ನ ಬಾಯ್ತುಂಬ ಸಕ್ಕರೆ ಹಾಕುತ್ತೇನೆ; ಒಳ್ಳೇ ವರ್ತಮಾನ ತಂದೆ!! ಒಳ್ಳೇದು, ಆತನು ಬರುವದೆಂದು?

ಜಂಗಃ—ಕೆಲವು ದಿವಸಗಳಲ್ಲಿ ತಾನಾಗಿಯೇ ಬರುವನು. (ಹೋಗುವನು.)

ಸುಗ್ಗಃ— ತಾನಾಗಿಯೇ ಬರುವನು? ಮುಳುಗಿ ಹೋದ ನನ್ನ ಚಂದ್ರಮನು, ಬೇಗ ಉದಯವಾಗುವನೇ? ನನ್ನ ಹೃದಯ ಹೂವನ್ನು ಅರಳಿಸುವನೇ? ಸೊನ್ನಲಾಪುರದ ಜನಮನೋಹರನು, ಬೇಗನೆ ಪೈದೋರುವನೇ? ಜಂಗನನ್ನು ಕರಕೊಂಡು ಬರುವದಕ್ಕಾಗಿ ಬೊಮ್ಮಣ್ಣನನ್ನು ಶ್ರೀಶೈಲಕ್ಕೆ ಕಳಿಸುವ ವ್ಯವಸ್ಥೆ ಮಾಡುವೆ; ದಿಕ್ಕುತೋರದೆ ದಿಗುಲಲ್ಲಿ ಸಿಕ್ಕು ಬಿದ್ದ ಪ್ರಾಣಪತಿಯನ್ನು ಸಂತೈಸಲಿಕ್ಕೆ ಹೋಗುವೆನು. (ಕುರಿತು) ಈ ಭಕ್ತಳ ಸೇವೆ ಪಡೆದು, ಮಾರ್ಗಕ್ರಮಣ ಮಾಡಿ, ಸ್ವಾಮಿ! (ನೋಡಿ) ಏನು? ಸ್ವಾಮಿಗಳು ಈಗಾಗಲೇ ಹೋಗಿಬಿಟ್ಟಿದ್ದಾರಲ್ಲ! (ಪರದೆ ಬೀಳುವದು.)

---

## ಷಷ್ಠ-ಪ್ರವೇಶ

---

(ಯಾತ್ರಿಕರೊಡನೆ ಸಿದ್ಧರಾಮನು.)

ಚೆನ್ನಃ—ಸಿದ್ಧರಾಮ, ನೋಡು ನಾವೀಗ ಮಲ್ಲಿಕಾರ್ಜುನನ ಸಮೀಪ ಬರುತ್ತಿರುವೆವು.

ಕಲ್ಯಾಃ—ಇಂಥ ಗಿರಿಗಂಹಾರದಲ್ಲಿ ಕುಳಿತವನು, ನಿನಗೆ ಶ್ರೈಲು ನಾಡಿನಲ್ಲಿ ಹೇಗೆ ಸಿಕ್ಕಾನು?

ಸಿದ್ಧಃ—ಅಹ! ಇದೇ ಶ್ರೀಶೈಲವು? ನನ್ನಯ್ಯನ ಸ್ಥಾನವು ಎಷ್ಟು ಮನೋಹರವಾಗಿದೆ; ಎಂಥ ಉಪದ್ವ್ಯಾಪಿಯು ಕೂಡ ಈ ಕಾನನದಲ್ಲಿ ಸಾಧುವಾಗಬಹುದು.

ಕಲ್ಯಾ:— ಹೊಟ್ಟೆಗೆ ಕೊಟ್ಟು ನನ್ನನ್ನಿಲ್ಲಿಟ್ಟರೆ ನಾನು ಇಂದೇ ಸಾಧು ಆಗುತ್ತೇನೆ.

ಚೆನ್ನ:— ಹೆಂಡರುಮಕ್ಕಳಿಗೇನು ಹೇಳುತ್ತೀ ?

ಕಲ್ಯಾ:— ನಾ ಹೇಳಬೇಕಾಗಿದ್ದರೆ, ಸಾಧು ಏಕೆ ಆಗುತ್ತಿದ್ದೆ ?

ಸಿದ್ಧ:— ಹೆಂಡರುಮಕ್ಕಳನ್ನು ಬಿಟ್ಟುಕೊಟ್ಟವರೇ ಸಾಧುಗಳೋ ? ಜಡೆಬೆಳೆಸಿ ಇಲ್ಲವೆ, ಗಡ್ಡಮೀಸೆಗಳನ್ನು ಬೋಳಿಸಿ ಕಾವೀ ಶಾಟಿಯನ್ನು ತೊಟ್ಟರೆ, ಸಾಧುವಿನ ಸೋಗು ಮಾತ್ರ ಆಗುತ್ತದೆ. ಅದರಿಂದೇನು; ನನ್ನ ಮಲ್ಲೇಶನೇ ನಿಜವಾದ ಸಾಧು! ಆತನೇ ಪರಮ ಗುರು! ಸಾಹುಕಾರರೇ, ಈಪೊತ್ತು ಮಲ್ಲೇಶನ ದರ್ಶನ ವಾಗುವದಲ್ಲವೇ?

ಚೆನ್ನ:— ಓಹೋ ಅವಶ್ಯವಾಗಿ!

ಕಲ್ಯಾ:— ಈ ಹೊತ್ತು ಏಕೆ, ಈ ತಾಸಿನಲ್ಲೇ ಆಗುತ್ತದೆ.

ಸಿದ್ಧ:— ಹಾಗಾದರೆ ನನ್ನ ಭಾಗ್ಯಕ್ಕೆಣೆಯಿಲ್ಲ.

ಪದ— ಧಾಟಿ—'ಪಡೆವೆನು ಸುಖವಾರ್ತೆಯು'

**ಹೊಂದುವೆ ಗುರುದರುಶನ, ಆನಂದ-ಸುಖದಲಿ ॥ ಪ ॥**

**ಕುಂದಿದ ಮನವರಳುತಿಹುದು, ದೇವದಯದಲಿ ॥ ಅ. ಪ ॥**

**ಮುಡಿವೆನು ಗುರುಚರಣಗಳನು॥**
**ಕುಡಿವೆನು, ನಲ್ನುಡಿಗಳನ್ನು ॥**
**ಒಡಲುರಿಯನು, ಆರಿಸುವೆನು।**
**ಮೃಡನದಯದಲಿ ॥ ೧ ॥**

ಕಲ್ಯಾ:— (ನೋಡುತ್ತ) ಅಗೋ, ಅದೇ ಶಿಖರವು.

ಚೆನ್ನ:— ಹೌದು ಹೌದು! ಅದೇ ಮಲ್ಲಿಕಾರ್ಜುನ ದೇವಾಲಯವು!

ಸಿದ್ಧ:—ಅದೆಯೋ? ಹಾಗಾದರೆ ಬೇಗನೆ ನಡೆಯಿರಿ. ನನ್ನಯ್ಯನನ್ನು ಕಾಣಬೇಕೆಂದು ಹಂಬಲವು ಹೆಚ್ಚಾಗಿದೆ.

ಚೆನ್ನ:—ಕಲ್ಲ್ಯಾಣೀ, ನೀನು ಆನಕಾ ತಡೆದು, ಹಿಂದಿನವರು ಕೂಡಿಕೊಂಡು ಜಾಗ್ರತೆಯಿಂದ ಬಾ. ನಾವು ಸಾವಕಾಶವಾಗಿ ಮುಂದೆ ಹೊರಡುತ್ತೇವೆ. (ಹೋಗುವರು.)

ಕಲ್ಲ್ಯಾ:—ಈ ಹೆಂಗಸರ ಜತೆಯಲ್ಲಿ ನಾ ಬೇಜಾರಾಗಿ ಹೋಗಿರುವೆ; ನನ್ನ ಮನೆಯ ಹೆಂಗಸರಾಗಿದ್ದರೆ, ಇಷ್ಟು ಹೊತ್ತಿಗೆ ಕೊಲೆ ಮಾಡಿ ಬಿಡುತ್ತಿದ್ದೆ; ಈ ಕಾಲ್ತೊಡಕನ್ನು ಕೂಲಿಯವರೇ ಹಾಗೂ ಹೀಗೂ ತಾಳುವರು. ಅಗೋ ನೋಡು—ಆ ಮುದ್ದ ಹುಡಿಗೆ ಪಾರ್ವತಿ ಹೇಗೆ ಹೊರಟಿದ್ದಾಳೆ; ಹಾಲುಣ್ಣೆಯಂತೆ!! ಮಾಡು ಎಷ್ಟು ಸಾವಕಾಶ ಮಾಡುತ್ತೀ ಮಾಡು, ಸಾವುಕಾರರ ಹೆಂಗಸರಿಗೆ ಕಾಲೇ ಇರುವದಿಲ್ಲವೆನ್ನಬೇಕು! ಅಂತೇ ವರದಕ್ಷಿಣೆಯೊಡನೆ ಕನ್ಯಾದಾನ ಮಾಡುತ್ತಾರೆ! ನಮ್ಮ ಹೆಂಗಸರು, ಒಳ್ಳೊಳ್ಳೆ ಗಂಡಸರನ್ನು ಹೌಹಾರಿಸಿ ಬಿಡುತ್ತಾರೆ!! [ನೋಡಿ] ಬಂದರಲ್ಲಾ!

ನೀಲಾ:—ಸಮುಗಾಗಿ ನಿಂತೆಯೇನು?

ಪಾರ್ವ:—ನಮ್ಮನ್ನು ದೂರ ಬಿಟ್ಟುಕೊಟ್ಟು ಮುಂದೆ ಬಂದಿರುವಿರಾ ಓಡಿ?

ಕಲ್ಲ್ಯಾ:—ಅದಕ್ಕಾಗಿಯೇ ನಿಂತಿದ್ದೇನೆ; ಬೇಗ ನಡೆಯಿರಿ ಅಪ್ಪನವರನ್ನು ಕೂಡಿಕೊಳ್ಳುವಾ.

ಪಾರ್ವ:—ಅವ್ವಾ, ಎಂಥಾ ಅಡವಿಯಲ್ಲಿದ್ದಾನೆ ದೇವರು?

ನೀಲಾ:—ಅದರ ಕತೆಯೇ ಬೇರೆ ಆದೆ; ಹಾಗೇ ಹೇಳುತ್ತೇನೆ; ಹೂ ಅನ್ನು. (ಹೋಗುವರು.)

ಚೆನ್ನ:—(ದೇವಾಲಯ ತೋರಿಸಿ) ಇದೇ ಗುಡಿಯಲ್ಲಿ ಮಲ್ಲೇಶ ನಿರುವದು.

ಸಿದ್ಧ:—ಇದೇ ಗುಡಿಯಲ್ಲಿಯೇ ಇರುತ್ತಾನೇ? (ಓಡಿಹೋಗಿ) ಮಲ್ಲೇಶಾ, ಮಲ್ಲೇಶಾ! ಎಲ್ಲಿದ್ದಾನೆ? ಇದ್ದಂತೆ ಕಾಣುವದಿಲ್ಲ.

ಚೆನ್ನ:—ಅದೇಕೆ? ಅಲ್ಲೇ ಇದ್ದಾನೆ. ನಡೆ ತೋರಿಸುತ್ತೇನೆ. (ಗುಡಿಯಲ್ಲಿನ ಮೂರ್ತಿ ತೋರಿಸಿ) ಈತನೇ ನಿನ್ನ ಮಲ್ಲೇಶನು!

ಸಿದ್ಧ:—(ಚಕಿತನಾಗಿ) ಈತನೇಕಾದಾನು? ನನ್ನ ಗುರುದೇವನು, ಕಲ್ಲೇಕಾದಾನು?

(ಪರಬಯ್ಯ, ಕಲ್ಲ್ಯಾಣಿ, ನೀಲಾಂಬೆ, ಪಾರ್ವತಿ ಬರುವರು.)

ಪರ:—ಎಲೇ ಹುಡುಗಾ, ನಾಲಗೆ ಸಡಿಲು ಬಿಡಬೇಡ!

ಸಿದ್ಧ:—ಅಪ್ಪಗಳಿರಾ, ನನ್ನನ್ನು ಕಷ್ಟಪಡಿಸಬೇಡಿ! ನನ್ನ ಗುರುದೇವನನ್ನು ಬೇಗನೇ ತೋರಿಸಿರಿ. ನನ್ನನ್ನು ಮಲ್ಲೇಶನ ಬಳಿಗೊಯ್ಯಿರಿ.

ಚೆನ್ನ:—ಈತನಲ್ಲದೆ ಇನ್ನಾವ ಮಲ್ಲೇಶನು!

ಸಿದ್ಧ:—ಛೇ, ಛೇ, ಈತನಲ್ಲ! ನಾನು ಮೋಸ ಹೋದೆ.

ಪರ:—ನಾನು ಪ್ರತಿವರುಷ ಬಂದು, ಇದೇ ಮಲ್ಲೇಶನ ದರ್ಶನ ತೆಗೆದುಕೊಂಡು ಹೋಗುತ್ತಿರುತ್ತೇನೆ.

ಚೆನ್ನ:—ಲಕ್ಷಾನಧಿ ಜನರು ಬರುವುದೂ ಇದೇ ಮಲ್ಲೇಶನ ಸಲುವಾಗಿ! ಇದರಲ್ಲೇನು ಸಂಶಯ ಪಡಬೇಡ.

ಸಿದ್ಧ:—ನನ್ನ ಕಣ್ಣಿಗೆ ಬಿದ್ದ ಮಲ್ಲೇಶನು ಬೇರೆಯಾಗಿದ್ದನು; ಭಸ್ಮಧಾರಿ! ಕೊರಳಲ್ಲಿ-ಕೈಯಲ್ಲಿ ರುದ್ರಾಕ್ಷೀ ಸರಗಳು ಕಂಗೊಳಿಸುತ್ತಿದ್ದವು!

ಪರಃ—ತಮ್ಮಾ, ನೀನೇನಾದರೂ ಕನಸು ಕಂಡಿರಬೇಕು.

ಚೆನ್ನಃ—ಇಲ್ಲಪ್ಪ, ಪುರಾಣಗಿರಾಣ ಕೇಳಿ ನಿನಗೆ ಭ್ರಾಂತಿಯಾಗಿರಬೇಕು.

ಕಲ್ಲ್ಯಾಃ—ಅದೆಲ್ಲಾ ಸುಳ್ಳು–ಭಸ್ಮಧಾರಿ–ರುದ್ರಾಕ್ಷಿಯೆಂದು ಹೇಳುವದರಿಂದ, ಈತನು ಔಡಲಗಿಡವನ್ನು ಚೆನ್ನಾಗಿ ನೋಡಿರಬೇಕು.

ಸಿದ್ಧಃ—ನೀವು ಏನನ್ನಾದರೂ ಅಂದುಕೊಳ್ಳಿ. ಜಡೆಯಲ್ಲಿಯ ಚಂದ್ರನು, ನನ್ನ ನೋಡಿದ ಕೂಡಲೆ, ಸಂತೋಷದಿಂದ ಮುಗುಳು ನಗೆ ನಗುವವನು! ಅಂಥ ಕುರುಹು, ಈ ಮಲ್ಲೇಶನಲ್ಲಿ ಕಾಣಿಸದು.

ಚೆನ್ನಃ—ತಮ್ಮಾ, ನಿನಗೆ ಸುಳ್ಳು ಹೇಳಿ ಮೋಸಗೊಳಿಸಬೇಕೆಂದು ನಮ್ಮಿಚ್ಛೆಯಿಲ್ಲ. ನಮಗೆ ಗೊತ್ತಿದ್ದುದನ್ನು ನಾವು ತೋರಿಸಿದೆವು! ನಿನ್ನ ಗುರುವಿನ ಸ್ಥಾನವು ಶ್ರೀಶೈಲವೇ ಅಲ್ಲವೇ?

ಸಿದ್ಧಃ—ಹೌದು!

ಚೆನ್ನಃ—ಹಾಗಾದರೆ, ನಿನ್ನ ಗುರುವಿನನ್ನು ನೀನೇ ಹುಡುಕಿಕೋ.

ಪರಃ—ನಾವು ತೋರಿಸುವುದರಲ್ಲಿ ನಿನಗೆ ನಂಬಿಗೆ ಯಾಗಲೊಲ್ಲದು. ನೀನು ಬಯಸುವ ಮಲ್ಲೇಶನೇ ಬೇರೆ ಕಾಣುತ್ತದೆ. ಅಂಥವನನ್ನು ತೋರಿಸುವುದು ನಮ್ಮಿಂದಾಗದು; ಅಂಥವನು, ಇಂದಿನ ವರೆಗೆ ಯಾರ ದೃಷ್ಟಿಗೂ ಬಿದ್ದಿಲ್ಲ.

ಸಿದ್ಧಃ—ಹಾಗಾದರೆ ಬಿಡಿರಿ. ನನ್ನ ತಂದೆಯ ನಾಡನ್ನಾದರೂ ತೋರಿಸಿದಿರಲ್ಲಾ; ನಾನೇ ನನ್ನಯ್ಯನನ್ನು ಹುಡುಕಿಕೊಳ್ಳುತ್ತೇನೆ. (ಹೊರಡುವನು.)

ಕಲ್ಲ್ಯಾಃ—ಈತನು ಚಾಮುಮಾರಾಜನೇ ಕಾಣಿಸುತ್ತಾನೆ.

ಪರಃ— ಏನೋ ಒಂದು ಭ್ರಾಂತಿ!

ಚೆನ್ನಃ— ಕಲ್ಲ್ಯಾಣೀ, ಧೂಳುದರ್ಶನವನ್ನು ಬೇಗನೆ ತೀರಿಸಿ ಕೊಂಡು ಮುಂದಿನ ಕೆಲಸಕ್ಕೆ ಹತ್ತ್ರೋಣ.

ಕಲ್ಲ್ಯಾಃ— ಆಗಲಿ. (ಹೋಗುವರು.)

ನೀಲಾಃ— ಆ ಹುಡುಗನಿಗೆ ಊಟ ಮಾಡಿ ಹೋಗೆನ್ನಲಿಲ್ಲ!

ಪಾರ್ವಃ— ಹೌದು ಆತನು ಎರಡು ದಿನಗಳಿಂದ ಚೆನ್ನಾಗಿ ಉಂಡಿದ್ದಿಲ್ಲ.

ನೀಲಾಃ— ಪಾಪ, ಎಲ್ಲೆಲ್ಲಿ ಅಲೆಯುವುದೋ ಹುಚ್ಚಹುಡುಗ!

ಪಾರ್ವಃ— ಅವ್ವಾ, ಅಡಿಗೆ ಆದ ಕೂಡಲೇ ಆತನನ್ನು ನಾನೇ ಹುಡುಕಿಕೊಂಡು ಬರುತ್ತೇನೆ. ಅಗೋ-ಅವರು ಅಷ್ಟುದೂರ ಹೋಗಿ ದ್ದಾರೆ; ಬಾ ಬೇಗ. (ಹೋಗುವರು.)

ಸಿದ್ಧಃ— (ಪ್ರವೇಶಿಸಿ) ನಮ್ಮಪ್ಪನ ನಾಡು ಸಿಕ್ಕಿತು; ನಮ್ಮಪ್ಪ ನೆಲ್ಲಿಯೂ ಸಿಗಲೊಲ್ಲನಲ್ಲಾ! ಎಲ್ಲಾ ಕಡೆಗೆ ನೋಡಿದೆನು; ಎಲ್ಲಿಯೂ ಇಲ್ಲ. ಈ ದೇವಾಲಯದಲ್ಲಿದ್ದಾನೇನು? (ಮುಂದೆ ಹೋಗಿ) ಮಲ್ಲೇಶಾ, ಗುರುದೇವಾ!

(ತೆರೆಯಲ್ಲಿ) ಎಲೇ ಹುಚ್ಚ ಹುಡಗಾ, ಇಷ್ಟೇಕೆ ಭ್ರಾಂತನಾಗಿ ರುವಿ? ನಮ್ಮ ಜತೆಯಲ್ಲಿ ಬಾ; ಕತ್ತಲಲ್ಲಿ ಹೀಗೆ ಸಂಚರಿಸಿದರೆ, ಹುಲಿ-ಕರಡಿಗಳ ಬಾಯಿಗೆ ತುತ್ತಾದೀ!

ಸಿದ್ಧಃ— ಹುಲಿ-ಕರಡಿಗಳ ಬಾಯಿಗೆ ತುತ್ತಾಗುವೇನೇ? ಅದು ಹೇಗೆ? ನನ್ನ ಗುರುದೇವನ ಮನೆಯಲ್ಲಿಯ ಹುಲಿ-ಕರಡಿಗಳು ನನ್ನನ್ನು ಮುಟ್ಟುವವೇ? 'ಗುರುವೇ ಎಲ್ಲಿರುವಿ?' ಮೋರೆ ತೋರಿಸುವದಿ ಲ್ಲವೇ? ಮೊದಲೇ ಅಡಗಿದ ಗುರುವನ್ನು ಕಾಣಗೊಡಬಾರದೆಂದು,

ಈ ಕತ್ತಲೆ ಬೇರೆ, ತನ್ನ ಸೆರಗು ಹೊಚ್ಚಿಬಿಟ್ಟಿದೆ. ಭೂಮಿಯನ್ನೆಲ್ಲ! ಮಲ್ಲೇಶಾ, ನಿನ್ನ ಭೆಟ್ಟಿಯಾದರೆ, ಈ ಕಾಳುಕತ್ತಲೆಯಲ್ಲಾ ಚದರುತ್ತದೆ. (ಸಿಂಹ ಗರ್ಜನೆಯಾಗುವದು.) ಅಹ್ಹಾ, ಇಂಥ ಗರ್ಜನೆಗೆ ನಾನು ಬೆದರುವೆನೇ? ಮಲ್ಲೇಶನೆಂಬ ಕಿರಾತನು, ನನ್ನ ಹೃದಯದಲ್ಲಿರುವಾಗ, ಈ ಸಿಂಹವ್ಯಾಘ್ರಗಳ ಪಾಡೇನು? ಗುರುದೇವನ ಜಯಘೋಷ ಮಾಡುವಾಗ—ಸಿಂಹಗರ್ಜನೆಯು ನನ್ನನ್ನು ಹೆದರಿಸುವವೇ? ಮಲ್ಲೇಶಾ, ನೀನೆಲ್ಲಿರುವಿ? ಶ್ರೀಶೈಲವೇ ನಿನ್ನ ಸ್ಥಾನವೆಂದು ನನಗೆ ಹೇಳಲಿಲ್ಲವೇ? ಹಾಗಾದರೆ ನೀನೆಲ್ಲಿರುವಿ? ಗುರುದೇವಾ, ನಿನ್ನನ್ನು ನಾನು ಕಾಣುವದೆಂತು? ಗುರುವೇ ನನ್ನಂಥ ಪಾಪಿಯನ್ನು ನೋಡಲೇಬಾರದೆಂದು ಅಡಗಿಕೊಂಡು ಕುಳಿತಿರುವಿಯಾ? ನಿನಗೆ ಅಪ್ರಿಯವಾದ ಈ ಜೀವಧಾರಣ ಮಾಡಿ ಫಲವೇನು? ನಿನಗಲ್ಲದ ವಸ್ತುವಾಗಿ, ನಿನ್ನ ಸೃಷ್ಟಿಯಲ್ಲಿ ನಾನೇತಕ್ಕೆ ಬಾಳಲಿ? ಸಾಕು! ದೇವಾ, ನಿನ್ನನ್ನು ಕಾಣುವ ಆಶೆ ತೀರಿತು; ಇನ್ನು ಮರಣಕ್ಕೇ ಶರಣು!! (ಹಿನ್ನೋಡಿ) ಅಗೋ ಅರುಣೋದಯವಾಗುತ್ತದೆ; ಅದು ನನ್ನ ವಿಚಾರಕ್ಕೆ ಅನುಮೋದನ ಕೊಡುತ್ತದೆ. ಜಗತ್ತಿನ ಕತ್ತಲೆ ಕರಗಿ, ಅರುಣೋದಯವಾದಂತೆ, ಸಿಗಲಾರದ ಗುರುದೇವನನ್ನು ಹುಡುಕುವ ಭ್ರಾಂತಿಯೆಂಬ ಕತ್ತಲೆಯನ್ನು ಓಡಿಸಲಿಕ್ಕೆ, ಮರಣವಿಚಾರದ ಅರುಣೋದಯವಾಯ್ತು! ಮಾಯವಾಯ್ತು, ನನ್ನಭ್ರಾಂತಿಯು ಲೋಪವಾಯ್ತು; ಮರಣವಿಚಾರವು ಪೂರ್ತಿಯಾಯ್ತು! ಸೌಂದರ್ಯದ ತಾಯಿಯಾದ, ವನದೇವಿಯೇ ನಿನ್ನ ಸಾಕ್ಷಿಯಾಗಿ ಸಂಕಲ್ಪಿಸಿದ ಮರಣವಿಚಾರವನ್ನು—ಈಗಲೇ ಕಾರ್ಯದಲ್ಲಿ ತರುವೆನು.

ಪದ—ಧಾಟಿ—' ನಡಿಸುಖಿ ಕುಂಜವನ, ಎಂಬಂತೆ.

ಕುಡುವೆನು ಪ್ರಾಣವನು, ಕಡುವೇಗದಿ।
ಸುಡುವೆನು ಜನ್ಮವನು ॥ ಪ ॥

ಪರಮನಕಾಣದ ಹಾಳು ಜೀವವು।
ಧರೆಯೊಳಿ ಬದುಕಿದೆ, ಸಫಲವದಲ್ಲವು ॥ ೧ ॥

**ಚಿತ್ರದ ಕುಸುಮಗಳು, ಎನಿತಿರೆ ಫಲವೇಂ।**
**ಕಸ್ತೂರಿನಾಣ್ಯೈಕ ಕುಸುಮವೆ ಮಾನ್ಯವು ॥ ೨ ॥**

ಏನು? ಪ್ರಾಣಕೊಡಲು, ನಿಂತಾಕ್ಷಣವೇ ದುಃಖನಿರಾಶೆಯ ಬೇಡಿಗಳು, ಕಡಿದೇ ಹೋದವಲ್ಲ! ತಿರುಗಿ, ಸಂತೋಷದ ಸಂಚಾರ!! 'ಗುರುವೇ' ಎಂದು ಅಳುವ ಹೇಡಿತನವು ಸಾಕು. ಪ್ರಾಣಾರ್ಪಣವೇ ಕೊನೆಯುಪಾಯವು; ಪ್ರಾಣಯಜ್ಞವನ್ನು ಎಲ್ಲಿ ಹೂಡಲಿ? ಪ್ರಾಣ ಕೊಡುವ ಬಗೆಹೇಗೆ? (ವಿಚಾರ) ನಿನ್ನೆ ನೋಡಿದಕೊಳ್ಳದಲ್ಲಿ ಹಾರಿಕೊಂಡು ಬಿಟ್ಟರಾಯ್ತು. ಅಹ್ಹ! ಉತ್ತಮೋಪಾಯ(ಕಡಿವಾಡಿಯ ಮೇಲೆ ಬಂದು) ಇದೇ ನನ್ನ ಯಜ್ಞಶಾಲೆ! ಇಲ್ಲೇ ನನ್ನಪ್ರಾಣವನ್ನು ಆಹುತಿ ಕೊಡುವುದು! ಪ್ರಾತಃಕಾಲದ ಸುಮೂಹೂರ್ತವೇ ಮುಹೂರ್ತವು! [ನಡು ಬಿಗಿದು ಕೈಜೋಡಿಸಿ] ಗುರುದೇವಾ, ನಿನ್ನನ್ನು ಪಡೆಯಲಾರದ ಅಭಾಗ್ಯನು ನಾನು! ನಿನ್ನನ್ನರಸಲಾಗದ ಹೇಡಿ ನಾನು! ನಿನ್ನ ಸೃಷ್ಟಿಯಲ್ಲಿ ನನ್ನಂಥವನು ಇರಲಾಗದು; ಇನ್ನೊಂದು ಜನ್ಮಕ್ಕೆ ನಿನ್ನ ಪಡೆಯುವ ಸೌಭಾಗ್ಯವನ್ನು ಬೇಡಿಬರುವೆ. ತಂದೆ, ತಾಯಿ, ಅಣ್ಣ, ಅಕ್ಕಂದಿರು—ನೀನಿಲ್ಲದಿದ್ದರೆ ಅಮಂಗಲರೇ! ಮಂಗಲಸ್ವರೂಪನಾದ ಪರಮಾತ್ಮನೇ ಯಾವ ತೊಡಕು ಇಲ್ಲದೆ, ನಿನ್ನ ಪಾದಸನ್ನಿಧಿಗೆ ಹೊರಟಿರುವೆ; ಪಾಪಿದೇಹವನ್ನು ಬಿಟ್ಟ ಮೇಲಾದರೂ ನನ್ನನ್ನು ಆಲಿಂಗಿಸುವದಿಲ್ಲವೇ? [ಕೆಳಗೆ ನೋಡಿ] ಓಹೋಹೋ, ನನ್ನ ಗುರುದೇವನ ಪಾದಸನ್ನಿಧಿಯ ಮಾರ್ಗವು, ಎಷ್ಟು ಮನೋಹರವಾಗಿರುವದು? ಮಲ್ಲೇಶಾ, ನನಗೇನು ಗೊತ್ತು? ಮೊದಲೇ ಗೊತ್ತಾಗಿದ್ದರೆ, ಇಷ್ಟುಹೊತ್ತಿಗೆ ನಿನ್ನ ಜತೆಯಲ್ಲಿ ಬಂದು ಬಿಡುತ್ತಿದೆ?

**ಪದ—ಭೈರವಿ ರಾಗ—ರೂಪಕತಾಳ**

**ಚರಣಗಳಲಿ ಬರುವೇ। ಹೇ ಗುರುವೇ ॥ ಪ ॥**

**ಮಂಗಲಮಯನೇ। ತುಂಗಸ್ವರೂಪನೇ।**
**ಲಿಂಗನೇ ನಿನ್ನಯಸಂಗದಲಿರುವೇ ॥ ೧ ॥**

ಪ್ರಾಣದಗಂಧವು। ದೇಹದ ಕುಸುಮವು।
ಪ್ರಾಣದಲರುಪಿಸಿ, ಜಾಣ ನಿನ್ನಯುವರ-। ಚರಣಗ...... ॥೨॥

ಮಲ್ಲೇಶಾ, ಗುರುದೇವಾ, ನಿನ್ನ ಚರಣಕ್ಕೆ ನನ್ನ ಸಹಸ್ರವಂದನೆಗಳು [ಕಣ್ಮುಚ್ಚಿ] ಜಯ ಮಲ್ಲೇಶಾ, ಜಯ ಮಲ್ಲೇಶಾ. [ಕೂಗಿ ಹಾರುವಷ್ಟರಲ್ಲಿ ಹಿಂದಿನಿಂದ]

ಜಂಗಮಮೂರ್ತಿ:— (ಮನ) ಭಕ್ತರನ್ನು ನಾನು ಪೊರೆಯುಜೇಕಲ್ಲವೆ ಮತ್ತಾರು? (ಹಿಡಿವನು)

ಸಿದ್ಧ:— [ಹಿನ್ನೋಡಿ, ಹಿಗ್ಗಿನಿಂದ] ಅಹ್ಹಾ! ಗಂಗಾಧರಾ! ತ್ರಿಶೂಲಧಾರಿ! ಭಕ್ತವತ್ಸಲಾ! [ಎಂದು ನಮಿಸಿ]

ಪದ—ಧಾಟಿ—ಮೇಲೆ ನೋಡಿ ಕಣ್ಣುತಣಿಪ, ಎಂಬಂತೆ

ಅಹ್ಹ! ನಿನ್ನದಯುವದೆಂತೋ।
ಅಹ್ಹ! ನಿನ್ನಮಮತೆಯೆನಿತೋ।
ಉದಿಸಿತೆನ್ನ ಮನದಲಿಂದು ಹರ್ಷಜ್ಯೋತಿಯು।
ಮುದಿಸಿತೆನ್ನ ಕಂದಿದ ಮನವನ್ನು, ನಾಣೆಯು ॥ ೧ ॥

ಏನುನಿನ್ನ ನಾಮಮಹಿಮೆ।
ಏನು ನಿನ್ನ ದಿವ್ಯ-ರೂಪು!
ನುತಿಸಲೆನ್ನ ವಾಣಿಯಿಲ್ಲ! ಅರಿದು ಲೀಲೆಯು॥
ಹತಾಶವಾದ ಹೃದಯಕಿಂದು ಅಮೃತವೃಷ್ಟಿಯು ॥ ೨ ॥

## ೨ನೇ ಅಂಕವು ಮುಗಿದುದು.



# ೩ನೇ ಅಂಕ.

## ಪ್ರಥಮ-ಪ್ರವೇಶ.

ಜಂಗಃ— [ಎದೆಗಪ್ಪಿ] ಮಗೂ, ನನ್ನ ಸಲುವಾಗಿ ಬಲು ಕಷ್ಟ ಪಟ್ಟೆಯಾ?

ಸಿದ್ಧಃ— [ಕೈಮುಗಿದು] ಗುರುದೇವಾ, ನನ್ನಂಥ ಅಲ್ಪನು ನಿನ್ನನ್ನು ಅರಸಬಹುದೇ? ಗುರುವೇ ನಿನ್ನ ದರ್ಶನದಿಂದ ನಾನು ಬಹು ಧನ್ಯನಾದೆನು; ದೇವಾ, ನನಗೆ ಕಷ್ಟವಾದಂತೆ ನಿನ್ನ ಅನೇಕ ಭಕ್ತರಿಗೆ ಕಷ್ಟವಾಗುತ್ತಿರಬಹುದಲ್ಲ? ದೀನದಯಾಳೂ, ಅವನ್ನೆಲ್ಲ ನೋಡಿ ನೀನು ಹೇಗೆ ಸೈರಿಸುತ್ತಿ? ಮುಕ್ಕಣ್ಣನಾದ ನೀನು, ಕಂಡೂ ಕಾಣದಂತೆ ಇರುವೆಯಾ?

ಜಂಗಃ— ನಾನು ಹೊರಗಿನ ಅಲೆದಾಟಗಳನ್ನು ನೋಡುತ್ತಿರುವಂತೆ, ಆಂತರಿಕವ್ಯಥೆಯನ್ನೂ ಒಳಗಣ್ಣಿನಿಂದ ನೋಡುತ್ತಿರುವೆನು. ಬಾಹ್ಯಾಡಂಬರಕ್ಕೆ ನಾನೆಷ್ಟು ಮಾತ್ರವೂ ಕರಗದೆ, ಆಂತರಿಕ ಆರ್ತತೆಗೆ ಎಲ್ಲಿದ್ದರೂ ಓಡಿಬರುತ್ತೇನೆ. ಸಿದ್ಧರಾಮಾ, ಅನುಭವಿಕನಾದ ನಿನಗೆ ಇವನ್ನೆಲ್ಲ ಹೇಳಬೇಕೇ?

ಸಿದ್ಧಃ— ಮಲ್ಲೇಶಾ, ಇನ್ನು ಮೇಲೆ ನನ್ನನ್ನು ತಪ್ಪಿಸುತ್ತಿರಬೇಡ. ನನ್ನ ಕೊರಳಾಣೆ ಆಗಿದೆ.

ಜಂಗಃ—(ಆತುರ) ಒಳಿತನ್ನು! ಒಳಿತನ್ನು!

ಸಿದ್ಧಃ— ಒಳಿತು, ಒಳಿತು!

ಜಂಗಃ— ಸಿದ್ಧಾ, ನನ್ನ ಬಂಗಾರವೇ, ನಿನ್ನನ್ನಿಷ್ಟು ವ್ಯಥೆ ಪಡಿಸಿದ ಕಾರಣವು ತಿಳಿದಿದೆಯೇ? ಬಂಗಾರದ ಶುದ್ಧತೆ-ಬೆಲೆ ಗೊತ್ತಾಗಬೇ

ಕಾದರೆ ಒರೆಗಲ್ಲಿಗೆ ಹಚ್ಚಬೇಕಲ್ಲವೇ? ನಾನು ಹೂಡಿದ ಮೋಡಿಯಾಟಕ್ಕೆ ಪ್ಪೈಕೊಟ್ಟು, ಭಕ್ತಿಯ ಬೆಳಕನ್ನೇ ಪಸರಿಸಿ ನನ್ನನ್ನು ಸೋಲಿಸಿಬಿಟ್ಟೆ! ಸಿದ್ಧರಾಮಾ, ನಿನ್ನ........

ಸಿದ್ಧಃ—(ನಡುವೆ) ಗುರುದೇವಾ, ಅದನ್ನೇನು ಮಾಡುವಿರಿ! ನಿಮ್ಮ ಒಡಲುರಿಯು ಶಾಂತವಾಗಿದೆಯೇ?

ಜಂಗಃ—ಸಿದ್ಧರಾಮಾ, ನಿನಗಿನ್ನೂ ತಿಳಿಯದೇ? ನಿನ್ನ ಭಕ್ತಿ ರಸವು ತುಂಬಿ ಹರಿಯುತ್ತಿರುವಾಗ ನನ್ನೊಡಲಲ್ಲಿ ನಿಜವಾದ ಉರು ಪುಂಟಾದೀತೇ?

ಸಿದ್ಧಃ—ಗುರುವೇ, ನಿನ್ನ ದರ್ಶನ ಭಾಗ್ಯವೊದಗಿದರೂ ನನಗ ವರ ಹುರುಳೇ ಹೊಳೆಯಲಿಲ್ಲವಲ್ಲ! ಸೂರ್ಯೋದಯವಾದರೂ ಕಮಲವರಳದೆ ಇದೆಯಲ್ಲ! ಕಮಲವರಳಿದರೂ, ಭ್ರಮರವು ಹಾರಿಹೋಗವಲ್ಲ! ಕಾಣದ ಕಣ್ಣಿಳಿದ್ದು ಫಲವೇನು? ಕೇಳದ ಕಿವಿಗಳಿಂದೇನು?

ಜಂಗಃ— ಮಗೂ, ನಿನಗವನ್ನೆಲ್ಲಾ ವಿಸ್ತರಿಸುತ್ತೇನೆ, ನನ್ನಾಶ್ರಮಕ್ಕೆ ನಡೆ.

ಸಿದ್ಧಃ—ನಿಮ್ಮ ಆಶ್ರಮವೆಲ್ಲಿ?

ಜಂಗಃ— ಇಗೋ, ಹತ್ತೇ ಹೆಜ್ಜೆ ಹೋದರಾಯ್ತು. (ತೋರಿಸುವನು.)

ಸಿದ್ಧಃ— [ನೋಡಿ] ಇಲ್ಲೇ ಆಶ್ರಮವಿದೆಯೇ? ನಾನು ನಿನ್ನೆ ಬೆಳತನಕ ಇಲ್ಲೇ ಸಂಚರಿಸಿರುವೆ, ನನ್ನ ಕಣ್ಣಿಗೆ ಬೀಳಲೇ ಇಲ್ಲವಲ್ಲ!

ಜಂಗಃ— (ನಗುತ್ತ) ಬೀಳಲಿಲ್ಲವೇ? ಚೆನ್ನಾಗಿ ನೋಡಲಿಲ್ಲ ವೇನೋ. (ಹೊಗುವರು.)

—ಆಶ್ರಮದಲ್ಲಿ—

ಸಿದ್ಧಃ— ಗುರುದೇವಾ, ನನಗೆ ಭಕ್ತಿಯರಹಸ್ಯವನ್ನೆಲ್ಲ ತಿಳಿಸಿ ಹೇಳಬೇಕು.

ಜಂಗಃ— (ನಗುತ್ತ) ಸಿದ್ಧೇಶಾ, ನಿನ್ನ ಚರಿತ್ರವೇ ಭಕ್ತಿರಹಸ್ಯ! ನಿನ್ನ ಚರಿತ್ರವನ್ನು ನೀನೇ ಅವಲೋಕಿಸಿದರೆ, ಭಕ್ತಿರಹಸ್ಯವು ಸ್ಪಷ್ಟವಾಗಿ ಕಾಣಿಸುತ್ತದೆ.

ಸಿದ್ಧಃ— ಗುರುವೇ, ಅಜ್ಞಾನಿಯಾದ ಬಾಲಕನಿಗೆ ದಯವಿಟ್ಟು ಹೇಳಿದರೇ ತಿಳಿಯೋದು.

ಜಂಗಃ—ಮತ್ತೇನು ಹೇಳುವುದು? ವ್ರತವನ್ನೇ ಆಗಲಿ, ಪೂಜೆಯನ್ನೇ ಆಗಲಿ, ಭಕ್ತಿಯಿಂದಲೇ ಮಾಡಬೇಕು; ಹೂಪತ್ರಿ ಗಂಧ-ಧೂಪಗಳನ್ನು ಮರೆತು ಬಿಟ್ಟರೂ, ಭಕ್ತಿಪುಷ್ಪವನ್ನು ಸಲ್ಲಿಸಲೇ ಬೇಕು; ಭಕ್ತಿಯಿಲ್ಲದ ಕರ್ಮವು ವ್ಯರ್ಥ, ಭಕ್ತಿಯಗಾಳಿ ಬೀಸಿದರೆ, ಮನವಂಗಳವು ಸ್ವಚ್ಛವಾಗುತ್ತದೆ. ಆ ಮನವಂಗಳವು ಮುಂದೆ ದೇವಾಲಯವಾಗಿ, ಪರಮಾತ್ಮನ ವಾಸಸ್ಥಳವಾಗುತ್ತದೆ. ಈ ಸ್ಥಿತಿಯಲ್ಲಿ ಮನಸ್ಸಿನ ಕಾರ್ಯಗಳೆಲ್ಲ ದೇವ ಪೂಜೆಯಾಗಿ ಪರಿಣಮಿಸುತ್ತವೆ. ಆಗ ಆತ್ಮ ಪರಮಾತ್ಮರ ಅಪ್ಪುಗೆಯಿಂದ ಭೇದವಳಿಯುವದು ಇದೇ ಐಕ್ಯ. ಮೋಕ್ಷ. ಇಂಥವರಿಗೆ ಸಂಸಾರಸರ್ಪದ ವಿಷವಿಲ್ಲ; ಜನನಮರಣಗಳ ರಾಹು ಕೇತುಗಳ ಸ್ಪರ್ಶವಿಲ್ಲ. ಸಿದ್ಧಣ್ಣಾ, ಮನುಷ್ಯಜನ್ಮದ ಉದ್ದೇಶವೇ ಇದು!

ಸಿದ್ಧಃ—[ವಂದಿಸಿ] ಗುರುದೇವಾ, ಈ ಉಪದೇಶಾಮೃತವುಂಡು, ನಾನು ಅಮರನಾದೆನು. ತಮ್ಮಲ್ಲಿ ಬಿನ್ನಯಿಸಿಕೊಳ್ಳುವ ಒಂದು ಮಾತಿದೆ. ನಾನು ತಮ್ಮ ಪಾದಸನ್ನಿಧಿಯಲ್ಲಿಯೇ ಬಿದ್ದುಕೊಂಡಿರುವಂತೆ ಕರುಣಿಸಿರಿ.

ಜಂಗಃ—ಸಿದ್ಧರಾಮಾ, ಹಾಗಾಗದು ನಿನ್ನ ಮೇಲೆ ಬಹು ಭಾರವಿದೆ. ನೀನು ಲೋಕಸೇವೆ ಮಾಡಿ ಧರ್ಮಧ್ವಜವನ್ನು ಎತ್ತಿ ಹಿಡಿ! ನೀನು ತತ್ವಾಮೃತವುಂಡು ತೃಪ್ತಿಹೊಂದಿದಂತೆ, ನಿನ್ನ ಮಾನವ ಬಂಧುಗಳಿಗೂ ಉಣ್ಣಿಸು.

ಸಿದ್ಧಃ— ಅಯ್ಯೋ ನನ್ನಂಥ ಅಲ್ಪನಿಗೆ ಇಂಥ ಮಹಾಕಾರ್ಯವು ಸಂದೀತೇ ?

ಜಂಗಃ—ಮಗೂ, ನಿನ್ನಲ್ಲಿ ಅಂಥ ಶಕ್ತಿ ಇದೆ. ಅವನ್ನು ನೀನು ಚೆನ್ನಾಗಿ ನಿರ್ವಹಿಸುವಿ. ನಿನ್ನಲ್ಲಿ ಉಪದೇಶಿಸುವ ಯೋಗ್ಯತೆ ಬಂದಿದೆ. ಅನುಕರಣೀಯನಂತೂ ಆಗೇ ಇರುವೆ. ಇನ್ನು ವಿಲಂಬ ಮಾಡ ಬೇಡ, ಹೊರಡು ಸೊನ್ನಲಾಪುರಕ್ಕೆ!

ಸಿದ್ಧಃ—ಎಲ್ಲವನ್ನೂ ನೀವೇ ಮಾಡಿಸುವವರು. ನಾನೇನು ಮಾಡ ಬಲ್ಲೆ? ನಾನು ತಮ್ಮಾಜ್ಞೆಯಂತೆ ನಡೆಯುವ ಸೇವಕ. ಗುರುವೇ ನಿನ್ನನ್ನಗಲಿ ಹೇಗೆ ಹೋಗಲಿ?

ಜಂಗಃ—ನೀನೇನು ಚಿಂತಿಸಬೇಡ. ಸೊನ್ನಲಾಪುರದಲ್ಲಿ ನಿನಗೆ ಮತ್ತೆ ದರ್ಶನ ಕೊಡುವೆ.

ಸಿದ್ಧಃ—ಎಂದು?

ಜಂಗಃ—ಇಲ್ಲಿ ಬಾ ಹೇಳುತ್ತೇನೆ. [ಕಿವಿಯಲ್ಲಿ ಹೇಳುವನು.]

ಸಿದ್ಧಃ—ಹಾಗಾದರೆ ಹೋಗಿ ಬರುತ್ತೇನೆ, ಮತ್ತೊಮ್ಮೆ ಆಶೀರ್ವದಿಸಿರಿ. (ವಂದಿಸುವನು.)

ಜಂಗಃ—[ಆಶೀರ್ವದಿಸಿ] ಧರ್ಮವಂತನಾಗಿ ನಿಜಸುಖ ಪಡೆಯಪ್ಪಾ!

ಸಿದ್ಧಃ—[ಹೋಗುತ್ತ]

**ಪದ—ಧಾಟಿ—‘ ಆನಂದ ಕಂದ ’ ಎಂಬಂತೆ**

**ನಾನಿಂದು ಧನ್ಯನಾದೆ। ಮನದಾಶೆಯನ್ನು ಪಡೆದೆ॥ ಪ॥**
**ಪರಿಹಾರವಾಯ್ತು ಶಮವು। ಸರಿಯಾಯ್ತು ಜೀವನ ಕ್ರಮವು॥ ಅ. ಪ॥**
**ಅರಿಯದೆ ಭ್ರಮಿಸುವ ಭ್ರಮರಕೆ ಕುಸುಮವಾಗಿ।**
**ಹೋಮಕೆ ಘೃತವದಾಗಿ।**
**ಇರದೆ। ಭರದೆ। ದಯದೆ। ತಾತೋದ್ಧರ್ಮೈಯ್ಯ॥೧॥**

# ದ್ವಿತೀಯ-ಪ್ರವೇಶ.

(ಸುಗ್ಗಲೆಯು ಮನೆಯಲ್ಲಿ)

ಸುಗ್ಗಃ--ಕಂದನ ಚಂದ್ರಮುಖವನ್ನು ನಾನಾವಾಗ ಕಂಡೇನು? ನನ್ನ ಆಶೆಯು ಮೃಗಕ್ಕೆ ತಿಳಿನೀರಿನ ಸರೋವರವು ಎಂದು ಸಿಕ್ಕೀತು? [ತಡೆದು] ಅಹ್ಹಾ! ನನ್ನ ಎಡಗಣ್ಣು ಹಾರಿತು. ನನ್ನ ಕಂದಯ್ಯನು ಸಮೀಪ ಬಂದಿದ್ದಾನೆ ಕಾಣುತ್ತೆ.

ಬೊಮ್ಮಣ್ಣಃ--(ಪ್ರವೇಶಿಸಿ) ಅವ್ವಾ-ಅವ್ವಾ ಸಿದ್ದಣ್ಣ ಬಂದ!

ಸುಗ್ಗಃ--ಸಿದ್ದಣ್ಣ ಬಂದನೇ? ಎಲ್ಲಿದ್ದಾನೆ? ನನ್ನ ಕಂದನು ನಿನ್ನೊಡನೇ ಬಂದನೇ? ನನ್ನ ತಾಯಿ-ನನ್ನ ತನುಮನಗಳಿಗೆ ಶಾಂತಿ ರಸವನ್ನುಣಿಸುವ ತಾಯಿಯು ಬಂದಳೇ? ಬೊಮ್ಮಣ್ಣಾ, ಎಲ್ಲಿದ್ದಾನೆ ಸಿದ್ದಣ್ಣ? ಇನ್ನೂ ಬರಲಿಲ್ಲವಲ್ಲ?

ಬೊಮ್ಮಣ್ಣಃ--ಈಗ ಬರುತ್ತಾನೆ; ಊರ ಮುಂದೆ ನಮ್ಮ ಆಕಳು ಕಂಡು, ಅದನ್ನು ಕಂಡು ಹರುಷದಿಂದ ಮೈತಿಕ್ಕುತ್ತ ಹಾಗೇ ನಿಂತಿದ್ದಾನೆ.

ಸುಗ್ಗಃ--ಎಲ್ಲಿದ್ದಾನೆ ತೋರಿಸ ಬಾ ನನ್ನ ಕೂಡ (ಎಂದು ಹೊರಡಲು) ಬಂದನಲ್ಲ ನನ್ನ ರಾಜ? (ಸಿದ್ಧರಾಮನ ಅಪ್ಪಿ) ಮಗೂ, ನಿನ್ನ ತಾಯಿಗೆ ಹೇಳದೇ ಹೋಗಬೇಕೇ? ನಾವು ಕಂಗಾಲರಾಗಿ, ದುಃಖದ ಮಡುವಿನಲ್ಲಿ ಬಿದ್ದಿದ್ದೆವು.

ಸಿದ್ಧಃ--ಅವ್ವಾ, ಮಲ್ಲೇಶನನ್ನು ಹುಡುಕುತ್ತ ಶ್ರೀಶೈಲಕ್ಕೆ ಹೋಗಿದ್ದೆ; ನಿನಗೆ ಹೇಳಿಹೋಗಲು ಮರವೇ ಆಯ್ತು.

ಮುದ್ದುಗೊಂಡಃ--[ಪ್ರವೇಶಿಸಿ] ಸಿದ್ದಯ್ಯ ಬಾ ಇಲ್ಲಿ [ಅಪ್ಪುವನು] ನನ್ನ ಪ್ರೇಮನೇತ್ರಗಳು ಈವೊತ್ತು ಬೆಳಕು ಕಂಡವು. ನನ್ನಯ್ಯ

ನಿನ್ನನ್ನು ಹುಡುಕಿ ಹುಡುಕಿ ನಿರಾಶರಾಗಿ, ದೇವರಲ್ಲಿ ಅನೇಕ ಹರ ಕೆಗಳನ್ನು ಹೊತ್ತಿದ್ದರಿಂದ ಇಂದು, ನಿನ್ನ ಮುಖಕಂಡೆವು.

ಸಿದ್ಧಃ—ದೇವರಲ್ಲಿ ಹರಕೆ ಹೊತ್ತಿರಾ? ನನ್ನ ಸಲುವಾಗಿ? ಅವ್ವಾ, ಮಲ್ಲೇಶನು ನನ್ನ ಮೇಲೆ ಕೃಪೆಮಾಡಿರುವಾಗ ಯಾವ ದೇವರ ಹರಕೆಯನ್ನೂ ಹೊರುವಕಾರಣವಿಲ್ಲ. ಅಂಥ ಮೂಢಭಕ್ತಿಯು, ನನ್ನ ಗುರುದೇವನಿಗೆ ಸಲ್ಲದು; ನಾನದನ್ನು ಅನುಮೋದಿಸಲಾಗದು. ತಿಳಿಯಿತೇ?

ಸುಗ್ಗಃ—ತಮ್ಮಾ, ನೀನಿನ್ನೂ ಚಿಕ್ಕವನು. ಅದೆಲ್ಲಾ ನಿನಗೆ ತಿಳಿ ಯದು. ದೇವರ ಹರಕೆ ತೀರಿಸದಿದ್ದರೆ ಆತನು, ನಮ್ಮ ಮೇಲೆ ಕೋಪಿ ಸಿಕೊಳ್ಳುವನು.

ಸಿದ್ಧಃ—ಅವ್ವಾ, ಇದನ್ನೇನು ಹೇಳುವೆ? ಕೋಪಿಸಿಕೊಳ್ಳುವ ವನು ದೇವರೇ ಅಲ್ಲ; ಹರಕೆಯ ಆಸೆಯು ಆ ದೀನ ಬಂಧುವಿಗೆ ರುಚಿ ಸಬಹುದೇ? ಆ ಕರುಣಾಳುವು, ಕಲ್ಲೆದೆಯವನಾಗಬಹುದೇ? ಭಕ್ತಿ ಯ ಪುಷ್ಪವೊಂದನ್ನು ದೇವನ ಪಾದಕ್ಕೆ ಅರ್ಪಿಸಿದರೆ, ಆತನು ನಮ್ಮ ಮೇಲೆ ಕೃಪೆಯ ಛತ್ರವನ್ನು ಹಿಡಿಯುವನು. ಆಗ ನಮಗೆ ಯಾವ ಆಪತ್ತುಗಳೂ ಸಂಭವಿಸಲಾರವು. ಅವ್ವಾ—

**ಪದ—ಮಾಲಕಂಸ ರಾ— ಗಆದಿತಾಳ,**

**ಪರಮನು ವರಕರುಣೆಯ ಗೈಯುವನು ॥**
**ಶರಣ ಜನರ ಭಕುತಿಗೆ ಸಲೆ ಪೊರೆವನು ॥ಪ॥**

**ಹೃದಯಕಮಲವರಳಲು ಘನಜ್ಞಾನದಿ ।**
**ಸದಯನು ಭ್ರಮರವು ಸುಳಿವುದು ಮೋದದಿ ॥೧॥**

**ಭಕುತಿಯಹೃದಯವೆ, ದೇವನ ನಿಲಯ ।**
**ಯುಕುತಿಯಲೋಗರ ನೆಚ್ಚನು, ಸದಯ ॥೨॥**

(ಹನುಮ, ಭೀಮ, ಸೋಮ, ಮೊದಲಾದವರು ಬರುವರು.)

ಸೋಮಃ—ಸಿದ್ದಣ್ಣಾ, ಶ್ರೀಶೈಲ ಮಾಡಿಕೊಂಡು ಬಂದೆಯಾ? ನಮ್ಮನ್ನೂ ಕರಕೊಂಡು ಹೋಗಿದ್ದರೆ ನಾವು ಬೈಯ್ಯುತ್ತಿದ್ದೆವೇನು?

ಭೀಮಃ—ನಮ್ಮನ್ನಗಲಿ-ಆಕಳುಗಳನ್ನು ಬಿಟ್ಟು ಶ್ರೀಶೈಲಕ್ಕೆ ಹೋಗುವ ಬುದ್ಧಿಯಾದರೂ ನಿನಗೆ ಹೇಗೆ ಬಂತು?

ಹನುಃ—ಹೇಳದೆ ಕೇಳದೆ ಕಳ್ಳನಂತೆ ಹೋಗಬೇಕೇ?

ಸಿದ್ಧಃ—ಗೆಳೆಯರೇ ನಾನು ತಪ್ಪು ಮಾಡಿದ್ದರೆ ಮನ್ನಿಸಬೇಕು.

ಹನುಃ—ಆವದ್ದಾಯ್ತು, ನಡೆ ಹೊಲಕ್ಕೆ! ಅವ್ವಾ ಬುತ್ತಿ ಕಟ್ಟಿ ಕೊಡು ಸಿದ್ದನಿಗೆ.

ಸುಗ್ಗಃ—ಛೇ ಛೇ, ನನ್ನ ಕಂದಯ್ಯನನ್ನು ನಾನೆಲ್ಲಿಯೂ ಬಿಡುವದಿಲ್ಲ.

ಮುದ್ದಃ—ನನ್ನ ಮಾನಸ ಹಂಸನು, ಎಲ್ಲಿಯೂ ಹೋಗುವುದು ಬೇಡ.

ಸಿದ್ಧಃ—ಗೆಳೆಯರೇ, ಶ್ರೀಶೈಲಕ್ಕೆ ಹೋಗಿ, ಮಲ್ಲೇಶನ ದರ್ಶನ ಮಾಡಿಕೊಂಡು ಬಂದೆ!

ಸುಗ್ಗ:—ಕಂದಾ, ನಿನ್ನ ಮುಗ್ಧಭಕ್ತಿಗೆ ಆ ಮಲ್ಲಯ್ಯನು ಕರುಣಿಸಿದ್ದು, ಆಶ್ಚರ್ಯವಲ್ಲ!

ಸೇವಕಃ—[ಪ್ರವೇಶಿಸಿ] ಸುಗ್ಗಲಾ ಮಾತೆಯುವರೇ, ಚಾಮಲಿ ರಾಣಿಯುವರು ಸಿದ್ಧರಾಮನು ಬಂದ ಸುದ್ದಿಕೇಳಿ, ಆತನ ದರ್ಶನ ತಕ್ಕೊಬೇಕೆಂದು ಪರಿವಾರದೊಡನೆ ಹೊರಟಿದ್ದಾರೆ.

ಸುಗ್ಗಃ—[ಅವಸರದಿಂದ] ರಾಣಿಯುವರೇ ಬಂದರು?

ಮುದ್ದುಃ—ಹಾಗಾದರೆ ಆಸನಗಳ ವ್ಯವಸ್ಥೆ ಮಾಡಬೇಕು!

ಸಿದ್ಧಃ—ಅಪ್ಪಾ, ನಾನು ರಾಣಿಯುವರ ಇದಿರಿಗೆ ಹೋಗುತ್ತೇನೆ. (ಹೋಗುವನು)



# ತೃತೀಯ-ಪ್ರವೇಶ.

[ಬೀದಿಯಲ್ಲಿ ವಿಶ್ವಾಸರಾಯನು]

ವಿಶಾ:—ಇದೇನು ಬಂತಪ್ಪಾ? ನನ್ನ ಅಜ್ಞಾನದ ಪ್ರದರ್ಶನವಾಗುವ ಕಾಲ ಬಂದಿತಲ್ಲ? ವಿಭೂತಿ, ಅವತಾರಿಕ ಪುರುಷ ಮೊದಲಾದ ದೊಡ್ಡ ದೊಡ್ಡ ಬಿರುದಾಂಕಿತಗಳು, ಚೋಟು ಹುಡುಗನಿಗೆ ಒರಹತ್ತಿದರೆ ನನ್ನಂಥ ವಿದ್ವಾನನಿಗೆ—ಶ್ರೀಮಂತನಿಗೆ ಹೇಗೆ ಸಹನವಾಗಬೇಕು? ಪೀಡೆಯು, ಎತ್ತಲೋ ಹೋಗಿತ್ತು; ರೋಗ ಪರಿಹಾರವಾಯ್ತೆಂದು ಆನಂದ ತುಂದಿಲನಾಗಿ, ಆ ಕಾರ್ಯದ ಕರ್ತೃವು ನಾನೇ ಎಂದು ನನ್ನ ಕೆಲವು ಹಿತಚಿಂತಕರ ಮುಂದೆ ಒಳ್ಳೇ ಆಢ್ಯತೆಯಿಂದ ಹೇಳಿಕೊಂಡಿದ್ದೂ ಆಯ್ತು. ಆದರೆ ಆ ಪೀಳಿಗೆಯು ಮತ್ತೆ ಬಂದಿದೆಯಂತೆ! ಆದಕಪ್ಪಾಗಿ, ಊರೊಳಗಿನವರೆಲ್ಲರೂ ಆ ಒಕ್ಕಲಿಗನ ಮನೆಗೆ ಹೋಗಿ ಬರುತ್ತಿದ್ದಾರೆ. ಇವರೆಲ್ಲ ಆ ಮೂಕನಲ್ಲಿ ಏನು ಕಂಡಿದ್ದಾರೆ? ಇನ್ನೂ ಮೋರೆಯ ಮೇಲಿನ ಹಾಲು ಆರಿಲ್ಲ. ಅಂಥಾ ಚಿಪ್ಪ ಹುಡುಗನನ್ನು ಶಿಖರಕ್ಕೆ ಏರಿಸಿಕುಳ್ಳಿರಿಸಿದ್ದಾರೆ; ಶ್ರೀಶೈಲದಲ್ಲಿ ಆತನಿಗೆ ಮಲ್ಲೇಶನು ದರ್ಶನ ಕೊಟ್ಟನಂತೆ! ಸಹಸ್ರ ಸಹಸ್ರ ಜಂಗಮರಿಗೆ ಭೋಜನಮಾಡಿಸುವ ಭಕ್ತರಿಗೆ ಆ ಮಲ್ಲೇಶನು ಭೆಟ್ಟಿಕೊಟ್ಟಿಲ್ಲವಂತೆ! ರುದ್ರಾಭಿಷೇಕಮಾಡಿಸಿ, ನೂರೊಂದು ಪೂಜೆಮಾಡುವ ಭಕ್ತರಿಗೆ ಕಾಣದ ದೇವರು ಈತನಿಗೆ ಕಾಣಿಸಿಕೊಂಡನಂತೆ! ಈ ಮೂರ್ಖಮಂಡಲಿಯೆಲ್ಲ ತಲೆದೂಗಿ ಬರುತ್ತಿದೆ. (ನೋಡಿ) ಅಗೋ ನಮ್ಮ ವಿನಾಯಕರಾಯನು ಬರುತ್ತಿರುವನು. ಅವನನ್ನು ಕಂಡರೆ ಪ್ರಾಣಹೋದಂತೆ ಆಗುತ್ತದೆ. ಅವನ ಕಣ್ಣಿಗೆ ಬೀಳಬಾರದು; ಇತ್ತ ಮರೆಯಾಗಬೇಕು. (ಹೊರಳಿ ನಿಲ್ಲುವನು.)

ವಿನಾ:—(ಬಂದು) ಯಾಕೆ ವಿಶ್ವಾಸರಾಯರೇ, ಮೂರ್ತಿ ಮತ್ತೆ ಬಂದಿದೆಯಂತಲ್ಲ! ನಿಮ್ಮ ಕಾರ್ಯ ಚಾಪಲ್ಯಕ್ಕೆ ನೀರು ಹತ್ತಿದಂತಾಯ್ತು!

ವಿಶ್ವಾ:— ವಾಹವ್ವಾ! ನನಗೊಬ್ಬನಿಗೇ ಬೇಕಾಗಿದೆಯೇನು? ನಿಮಗದರ ಅಭಿಮಾನವಿಲ್ಲವೇ? ನಾನೇನು ಮಾಡಲಿ? ಬಾಣಹೊಡೆಯುವಷ್ಟರಲ್ಲಿ ತಪ್ಪಿತು; ಇನ್ನೊಂದು ಗುರಿಯಿಡೋಣ. ನೀವೆಲ್ಲಾ ಇದಕ್ಕೆ ನೆರವಾಗಲೇಬೇಕು. ಅದನ್ನೆಲ್ಲ ಹೇಳುತ್ತೇನೆ. ಹೀಗೆ ಬಾ. (ಹೋಗುವರು.)

## ಚತುರ್ಥ-ಪ್ರವೇಶ.

ಸಿದ್ಧರಾಮ:— ಏನಿದು? ಈ ಹೊತ್ತಿನ ಸೃಷ್ಟಿಯ ಸೊಬಗೇ ವಿಲಕ್ಷಣವಾಗಿದೆ! ಸೂರ್ಯನು ಮುಳುಗುವ ಹಾದಿಯನ್ನೇ ನೋಡುತ್ತ ಕುಳಿತ ಈ ಕರಿಮೋಡಗಳು, ಭೀಕರವಾಗಿ ತಾಂಡವನಾಡುತ್ತ ನೆರೆದವು! ಈ ಗಾಳಿಗೆ ಇಷ್ಟು ಶಕ್ತಿಯೆಲ್ಲಿಂದ ಬಂದಿರಬೇಕು? ಅಗೋ, ನೋಡು ನೋಡುವುವರೊಳಗೆ ಈ ಮರವು ಜೊಗ್ಗಿ ನಮಸ್ಕರಿಸುತ್ತಿದ್ದರೂ, ವಾಯುದೇವನು ಜಿಗಿದು ಹೋದನು! ಆಗೋ, ಧೂಳಿನ ಸೋಪಾನ! ತಮ್ಮ ಕೀಳುಬಾಳ್ವೆಯನ್ನು ಕುರಿತು, ದೇವನಲ್ಲಿ ಮೊರೆಯಿಡುವದಕ್ಕಾಗಿ ಧೂಳು, ಸಾಲುಸಾಲಾಗಿ ಆಕಾಶಕ್ಕೆ ಏರಹತ್ತಿದೆ. ಆಹ್ಹ! ಸೃಷ್ಟಿಯ ಲೀಲೆಯೇ ವಿಚಿತ್ರವಾಗಿರುತ್ತೆ. ಮಳೆ ಬೇರೆ ಬರಹತ್ತಿತು! ಇಷ್ಟೆಲ್ಲ ಡೊಂಬೆಯನ್ನು ಶಾಂತಮಾಡುವುದಕ್ಕಾಗಿ ಮಳೆಯು— ಮರಮಳೆಯು ಬರಲೇ ಬೇಕಲ್ಲವೇ? (ವಿಚಾರ) ಇವನ್ನೆಲ್ಲ ನೆನಿಸಿಕೊಂಡರೆ, ನನ್ನ ಮಲ್ಲೇಶನು ಬರುವ ಸಮಯವು ಇದೇ ಎನಿಸುತ್ತದೆ; ಹೌದು. ಹೌದು! ಆತನು ಹೇಳಿದಂತೆ ಎಲ್ಲಾ ಲಕ್ಷಣಗಳೂ ಆಗಹತ್ತಿವೆ. (ಆನಂದ) ಹಾಗಾದರೆ, ನನ್ನ ಗುರುದೇವನ ದರುಶನವು ಈ ಹೊತ್ತು ಮತ್ತೆ ಆಗುವುದಲ್ಲ!

ಪದ--ಧಾಟಿ—'ಲಲಿತಾಂಗಿ ದೇವಿ'

ಗುರುದೇವ ಬರುವನಿಂದು। ವರ।
ಚರಣ ದೊರೆವುದಿಂದು ॥ಪ॥

ಸುರಿಯುತ ಸರಿಯಲಿ ಧರೆಗಿಳಿಯುವನೋ।
ಮಿರುಗುವ ಮಿಂಚನು, ಏರಿ ತಾ ಬರುವನೋ॥
ಕೊರೆಯುವ ಗುಡುಗಿನ ಬಳಿಯಿಂದಿಳಿವನೋ।
ಸುರತರುವಿನ ನೆರಳಾಯ್ತಿದು॥ ೧॥

ಈಗ ಕಾಲವಿಳಂಬ ಮಾಡದೆ, ಊರ ಹೊರಗಿನ ಗೋವುಗಳ ಹಟ್ಟಿಯ ಬಳಿ, ಮಂದಾರವೃಕ್ಷಕ್ಕೆ ಹೊರಡಬೇಕು. (ಹನುಮ, ಭೀಮ, ಸೋಮ)

ಭೀಮ:—(ಕಂಬಳಿ ಹೊದ್ದುಕೊಂಡು) ಯಾರು ಸಿದ್ಧಯ್ಯ ?

ಸಿದ್ಧ:—ಹೌದು! ಭೀಮಣ್ಣಾ ಮನೆಗೆ ಹೊರಟಿರಾ?

ಸೋಮ:—ನಾವು ಮನೆಗೆ ಹೊರಟೆವು. ನೀನೆಲ್ಲಿ ಹೊರಟೆ? ಇಂಥ ಮಳೆಯಲ್ಲಿ?

ಸಿದ್ಧ:—ಕೊಂಚ ಕೆಲಸವಿದೆ, ಹಟ್ಟಿಯಲ್ಲಿ!

ಹನು:—ಹುಚ್ಚಪ್ಪಾ, ಹಟ್ಟಿಯಲ್ಲೇನು ಕೆಲಸ? ಲೋಕವೇ ಪ್ರಳಯವಾಗುವ ಹೊತ್ತು ಬಂದಿದೆ! ಕೆಲಸವೇನು ಮತ್ತೆ! ಮುಗಿಲು ನೋಡು, ಮೋಡಬೇಡನು ಮನುಷ್ಯರ ಬೇಟೆಯಾಡುವಂತೆ, ಕಾಯ್ದ ಬಾಣಗಳನ್ನು ಹೊಡೆಯುವ ಮಿಂಚು ನೋಡು, ದಿಕ್ಕು ತಪ್ಪಿ ಮೂರ್ಛೆ ಬರುತ್ತೆ.

ಸಿದ್ಧ:—ಹೌದು! ಬಲು ಸೊಗಸಾದ ಸಮಯ!

ಹನು:—ಎಲಾ ನಿನ್ನ ಸೊಗಸು ಹಾಳಾಗಾ! ನಮ್ಮದನ ಕಳೆದಾವು ಓಡಿರೋ. (ಹೋಗುವರು.)

ಸಿದ್ಧಃ—(ನೋಡಿ) ಇದೇ ಮಂದಾರವೃಕ್ಷವು, ಮಲ್ಲೇಶನು ಮೈದೋರುವ ಸ್ಥಾನವಿದೇ. ಮಲ್ಲೇಶಾ, ಏನು ನಿನ್ನ ಐಶ್ವರ್ಯವು! ಇಂಥ ಗುಡುಗುಸಿಡಿಲುಗಳ ವಾದ್ಯದೊಡನೆ, ಮಿಂಚಿನ ಬೆಳಕಿನೊಡನೆ, ಛತ್ರಂಗಿಯಾದ ಮಳೆರಾಜನೊಡನೆ—ನನ್ನಂಥ ಪಾಮರನಿಗೆ ದರ್ಶನಕೊಡುವ ನಿನ್ನ ಲೀಲೆಯನ್ನು ಎಷ್ಟೆಂದು ವರ್ಣಿಸಲಿ? ಮಂಗಲಮಯನೇ, ಗಂಗಾಧರ, ದಯಾನಿಧೀ, ಭಕ್ತವತ್ಸಲಾ ನಿನ್ನನ್ನು ನಾನೆಂತು ಗುರುತಿಸಲಿ? ಪರಮಾತ್ಮಾ, ವಿಶ್ವವ್ಯಾಪೀ ನೀನು ಎಲ್ಲಿರುವಿ? ನನಗೆ ಮೈದೋರುವುದು ಯಾವಾಗ? (ಆಶ್ಚರ್ಯ) ಅಯ್ಯಯ್ಯೋ ಇದೇನು ತೇಜವು? ಕೋಟಿಸೂರ್ಯರು ಒಮ್ಮೆಲೆ ಉದಯವಾಗಿ ಮುಳುಗಿ ಹೋದರಲ್ಲ! ನನ್ನಯ್ಯ ನಿನ್ನನ್ನೆಲ್ಲಿಯೂ ಕಾಣಲಿಲ್ಲವಲ್ಲ! (ಎಂದು ಕೈಯಾಡಿಸುತ್ತಿರುವಾಗಿ ಪರಮಾತ್ಮಲಿಂಗವು ಸಿಗಲು) ಪರಮಾತ್ಮಾ, ನಿನ್ನ ಈ ಪುಟ್ಟ ಆಕೃತಿಯಲ್ಲಿ ಬ್ರಹ್ಮಾಂಡವೆಲ್ಲ ಅಡಗಿದೆಯಲ್ಲ! ದೇವಾ, ಈ ಸ್ಪಟಿಕದ ಹೊಳಪಿನಲ್ಲಿ, ಸೂರ್ಯಚಂದ್ರನಕ್ಷತ್ರಾದಿಗಳ ಜ್ಯೋತಿಯೆಲ್ಲ ತುಂಬಿದೆಯಲ್ಲ!! ಹೇ ನಿರ್ಗುಣ ಪರಮಾತ್ಮಾ, ನಿನ್ನೀ ಸ್ವರೂಪದಲ್ಲಿ ಮೂವತ್ತುಮೂರು ಕೋಟಿ ದೇವತೆಗಳೆಲ್ಲ ವಾಸಿಸುವರಲ್ಲ!! ಧನ್ಯ! ಧನ್ಯ! ಮಲ್ಲೇಶಾ, ನಿನ್ನ ಈ ಕೃತಿಗೆ ನಾನು ಮೂಕನಾದೆ! ನಿನ್ನೊಡನೆ ಭಕ್ತಿ ಮಾತ್ರ ಮೌನವಾಣಿಯಿಂದ ಮಾತಾಡಬಲ್ಲದು. (ಕುಳಿತು, ಕಣ್ಮುಚ್ಚಿ, ಕೈಯಲ್ಲಿ ಲಿಂಗ ಹಿಡಿದು)

**ಪದ—ಧಾಟಿ— ‘ ನಿಜಗುರು ಧ್ಯಾನವ ಮಾಡೋ ’**

**ಗುರುಪದ ಸೌಖ್ಯದ ಬೀಡು ॥ಪ॥**

**ಜನುಮದ ಫಲವನು ಹಣ್ಣಿಸುತಿಹನು ।**

**ಕನಿಕರದಿ ಸಲೆ ಸಾರ್ಥಕಗೊಳಿಪನು ॥೧॥**

**ಭಕುತಿಯೆ ಭಾಗ್ಯವು ಆ ಕರುಣಾತ್ಮಗೆ ।**

**ಮುಕುತಿಯಮೃತವನು, ಕುಡಿಸುವ ದೇವನು ॥೨॥**

(ಗುರುಕೇದಾರ ಮತ್ತು ಕಲ್ಲಿದೇವ ಬರುವರು.)

ಗುರು:—ಕಲ್ಲಿದೇವಾ, ನೋಡು. ರಾತ್ರಿಯಲ್ಲಿ ಗ್ರಾಮಜನಗಳು ಯಾವ ಪುಣ್ಯಾತ್ಮನನ್ನು ಹುಡುಕುತ್ತಿದ್ದರೋ ಆ ಪುಣ್ಯಾತ್ಮನು, ಇಗೋ ಇಲ್ಲೆ ಕುಳಿತಿದ್ದಾನೆ ಧ್ಯಾನಮಗ್ನನಾಗಿ !

ಕಲ್ಲಿದೇವ:— ಸೂರ್ಯೋದಯದ ಈ ಸಮಯದಲ್ಲಿ ಪ್ರತಿಸೂರ್ಯನಂತೆ ಪ್ರಕಾಶಿಸುವ ಈ ತೇಜೋಮಯ ಪುರುಷನು, ಹಸ್ತಪೀಠದಲ್ಲಿ ಲಿಂಗಸ್ಥಾಪನೆ ಮಾಡಿ, ಅದರಲ್ಲಿ ತಲ್ಲೀನನಾಗಿ ಕುಳಿತಿರುವನು.

ಗುರು:—ಚಂದ್ರೋದಯವಾಗಲು, ಕಡಲು ಉಕ್ಕೇರುವಂತೆ ಈ ಪುಣ್ಯಾತ್ಮನನ್ನು ಕಂಡು, ಭಕ್ತಿರಸವು ಉಕ್ಕೇರಹತ್ತಿತು. ಈ ವಂದನೀಯನಾದ ದೇವಪುರುಷನು, ಭಕ್ತಿರಸವನ್ನು ಉಂಡು ಉಸುರಿದವನು!

ಕಲ್ಲಿ:— ಪ್ರಾತಃಕಾಲದ ಪ್ರಶಾಂತ ಸಮಯದಲ್ಲಿ, ಗಿರಿಕಂದರದಲ್ಲಿ ಗಂಗೆ ಹರಿದುಹೋದಂತೆ ನನ್ನ ಮನಸ್ಸು ನೀರಿನಂತೆ ನಿರ್ಮಲವಾಯ್ತು. ಈತನ ದರ್ಶನ ಲಾಭದೊಡನೆ, ಉಪದೇಶಶ್ರವಣವೂ ಆದರೆ ನಮ್ಮವು ಜನ್ಮಸಾರ್ಥಕವಾದಂತಲ್ಲವೇ?

ಗುರು:—ಅಲ್ಲಿಯವರೆಗೆ ಈ ಸತ್ಪುರುಷನ ಚರಣಸನ್ನಿಧಿಯಲ್ಲಿಯೇ ಕುಳಿತುಕೊಳ್ಳೋಣ. (ಕುಳ್ಳಿರುವರು)

ಮುದ್ದುಗೊಂಡ:—(ಬಂದು) ಸುಗ್ಗಲೇ ನೋಡು. ನಿನ್ನ ಚಿರಂಜೀವನು, ಲಿಂಗಪೂಜೆಯಲ್ಲಿ ನಿರತನಾಗಿ ಕುಳಿತಿದ್ದಾನೆ.

ಸುಗ್ಗ:—(ನೋಡಿ) ಆಹಾ! ಸಿದ್ಧೇಶಾ ಮಲ್ಲೇಶನೇ ನಿನ್ನ ಕಯ್ವಶನಾಗಿರಲು, ಗುಡುಗುಸಿಡಿಲುಗಳು ನಿನ್ನನ್ನು ಹೆದರಿಸುವವೇ? ಭಕ್ತಿರಸವು ನಿನ್ನಲ್ಲಿ ಕೋಡಿಯಾಗಿ ಹರಿಯುತ್ತಿರಲು, ಮಳೆ-ಕಾರುಗಳಿಗೆ ನೀನೇಕೆ

ಅಂಜುವಿ? ಸಿದ್ಧಣ್ಣಾ, ಲಿಂಗಪೂಜೆಗೆ ನಿನಗೆ ಮನೆಯಿಲ್ಲವೇ? ಇಂಥ ಹಟ್ಟಿಯಲ್ಲಿ ಕುಳಿತುಕೊಳ್ಳುವುದೇಕೆ?

ಸಿದ್ಧಃ—(ಎಚ್ಚತ್ತು) ಗುರುದೇವಾ, ಮಲ್ಲೇಶಾ! [ಎಲ್ಲರೂ ವಂದಿಸುವರು.]

ಮುದ್ದುಃ—ತಮ್ಮಾ, ರಾತ್ರಿಯಲ್ಲಿ ಹೀಗೇ ಹೊರಟು ಬರಬೇಕೇ?

ಸಿದ್ಧಃ—ಕ್ಷಮಿಸು ತಂದೆ. ಗುರುದೇವನು ಬರುವ ಸಮಯವೊದಗಿತೆಂದು, ಆತುರದಿಂದ ಹಾಗೇ ಹೊರಟು ಬಂದೆ.

ಸುಗ್ಗಃ—ಮಗೂ ಅದೆಲ್ಲಾ ಚೆನ್ನಾಯಿತು; ನಡೆ ಮನೆಗೆ!

ಸಿದ್ಧಃ—ಅವ್ವಾ ಈಗ ಗುರುಸ್ಥಲವನ್ನು ಬಿಟ್ಟು ನಾನೆಂತು ಬರಲಿ? ಈ ನನ್ನ ಮಲ್ಲೇಶನ ಪಾದ ಸನ್ನಿಧಿಯನ್ನಗಲಿ ಮನೆಗೆ ಬರಲೇ! ಅವ್ವಾ, ನನ್ನ ಗುರುದೇವನು ಮಿಂಚಿನೊಡನೆ ತೋರಿದ ಈ ದೇವಾಲಯವನ್ನು ಬಿಟ್ಟು, ನನ್ನ ಪ್ರೀತಿಯ ಮಲ್ಲೇಶನನ್ನು ಬಿಟ್ಟು, ಮನೆಯಲ್ಲಿ ನಾನು ಬಳಕೊಳ್ಳುವದೇನಿದೇ?

ಸುಗ್ಗಃ—ಕಂದಾ, ನಿನ್ನ ಮಲ್ಲೇಶನನ್ನು ಕರಕೊಂಡು ನಡೆ. ನಮ್ಮ ಮನೆಯಲ್ಲಿ ಆತನನ್ನು ಚೆನ್ನಾಗಿ ಸತ್ಕರಿಸೋಣ.

ಸಿದ್ಧಃ—ಅವ್ವಾ, ಇಲ್ಲಿರುವುದೇ ನನಗೆ ಸಂತೋಷ; ನನ್ನ ಮಲ್ಲೇಶನಿಗೆ ಇಷ್ಟ! ಅವ್ವಾ, ನನ್ನ ಅಭಿಷ್ಟವನ್ನು ಪೂರ್ತಿಗೊಳಿಸುವದಿಲ್ಲವೇ?

ಮುದ್ದುಃ—ಸುಗ್ಗಲೇ ಈಶಪ್ರೇರಣೆಯಿಂದಲೇ ಎಲ್ಲ ಕಾರ್ಯಗಳೂ ಜರುಗತಕ್ಕವು ಅಲ್ಲವೇ? ನೀನೇಕೆ ಆತಂಕಪಡಿಸುತ್ತೀ? ಸಿದ್ಧೇಶಾ, ನಿನ್ನ ಮಾರ್ಗದಲ್ಲಿ ನೀನು ನಿರಾತಂಕವಾಗಿ ಹೋಗು! ನಿನಗೊದಗಿದ ದೈವೀ ಸಂಪತ್ತು, ಈ ದೀನ ದಂಪತಿಗಳಿಗೂ ಲಭಿಸುವಂತೆ ಆ ಮಲ್ಲೇಶನು ಅನುಗ್ರಹಿಸಿದರಾಯ್ತು.

ಸುಗ್ಗಃ—ಮನೆಯಲ್ಲಿ ನಮ್ಮ ಕೆಲಸವಾದರೂ ಏನು? ಇಲ್ಲೇ ಮಲ್ಲೇಶನ ಸನ್ನಿಧಿಯಲ್ಲಿ ವಾಸಿಸುತ್ತ ಇರುವದಕ್ಕಾದರೂ ನಿನ್ನ ಅನುಮತಿಯಿರುವದೇ ಸಿದ್ಧಾ?

ಸಿದ್ಧಃ—ಈ ಮಲ್ಲೇಶನ ಸನ್ನಿಧಿಯಲ್ಲಿ ಪ್ರಾಣಕೋಟಿಯೆಲ್ಲವೂ ಮುಕ್ತಿ ಮಾರ್ಗವನ್ನು ಪಡೆಯಲೆಂದು ಹಾರೈಸುತ್ತಿರುವಾಗ, ನನ್ನ ಜನ್ಮದಾತೃಗಳಿಗೆ ಆತಂಕಪಡಿಸಬಲ್ಲೆನೇ?

ಗುರುಃ—(ಕೈಮುಗಿದು) ಸಿದ್ಧೇಶಾ, ಈ ದೀನರನ್ನು ಉದ್ಧರಿಸುವದಕ್ಕಾಗಿ, ಅವರ ಸೇವೆಯನ್ನು ಸ್ವೀಕರಿಸು.

ಕಲ್ಲಿಃ—ಮಲ್ಲೇಶನ ಅನುಗ್ರಹದಿಂದ ನೀನು ಮಾಡಬೇಕಾದ ಕಾರ್ಯಗಳನ್ನು ನಮ್ಮಿಂದ ಮಾಡಿಸಬಹುದೇ?

ಸಿದ್ಧಃ— ನನ್ನ ಪ್ರಿಯಬಂಧುಗಳೇ, ಈ ಸ್ಥಳದಲ್ಲಿ ಮಲ್ಲೇಶನ ದೇವಾಲಯವೊಂದಾಗಬೇಕು; ಈ ಸ್ಥಳವು ವಿಸ್ತಾರವಾದ ಆಶ್ರಮದಂತಾಗಿ ಬಂದ ಭಕ್ತರಿಗೆ ಭಕ್ತಿಮಾರ್ಗವು ಉಪದೇಶಿಸಲ್ಪಡಬೇಕು. ಇಲ್ಲೊಂದು ದೊಡ್ಡ ಗೋಶಾಲೆಯು, ನಿರ್ಮಿತವಾಗಬೇಕು. ಶ್ರೀ ಮಲ್ಲೇಶನ ಕೃಪೆಯಿಂದ ಇವೆಲ್ಲಾ ಸಾಧಿಸುತ್ತವೆಂದೇ ನಂಬಿರುವೆ.

ಗುರುಃ—ದೇವಾಲಯವನ್ನು ಕಟ್ಟಿಸುವದಕ್ಕೆ ನಾವಿಬ್ಬರೂ ಯತ್ನಿಸುತ್ತೇವೆ; ನೂರಾರು ಕೂಲಿಯವರನ್ನೂ, ಹತ್ತಿಪ್ಪತ್ತು ಚತುರರಾದ ಶಿಲ್ಪಿಗಳನ್ನೂ ಕೆಲಸಕ್ಕೆ ಹಚ್ಚಿದರೆ, ಕೆಲಸವು ಹತ್ತೆಂಟು ದಿನಗಳಲ್ಲಿ ಮುಗಿದು ಬಿಡುವದು.

ಕಲ್ಲಿಃ—ಇದೆಲ್ಲ ಉತ್ಸಾಹವು ಗುರು ಮಲ್ಲೇಶನ ಕರುಣೆಯಿಂದಲೇ! ಇರಲಿ. ಈಗ ಸಿದ್ಧೇಶನಿಗಾಗಿ ಒಂದು ಗುಡಿಸಲವನ್ನು ನಿರ್ಮಿಸಬೇಕು.

ಗುರುಃ— ಅದರ ವ್ಯವಸ್ಥೆಯನ್ನು ಮೊದಲು ಮಾಡಿಸೋಣ (ಹೋಗುವರು.)

# ಪಂಚಮ-ಪ್ರವೇಶ.

(ಆಶ್ರಮದ ಬಳಿ ಮೋಹಿನಿ)

ಮೋಹಿನಿಃ—(ತನ್ನ ಅಂಗೋಪಾಂಗಗಳನ್ನು ನೋಡಿಕೊಳ್ಳುತ್ತ) ಅಹ್ಹಾ ನನ್ನ ಸೌಂದರ್ಯವು ನನ್ನ ಹೆಸರಿಗೆ ತಕ್ಕಂತೇ ಅದೆ; ಮನ್ಮಥ ಬಾಣವೇ ನೀನು ಸಿದ್ಧರಾಮನನ್ನು ಈ ಸಮರದಲ್ಲಿ ಸೋಲಿಸಿದರೆ, ನಿನ್ನ ಶಕ್ತಿಯು ಸಾರ್ಥಕವಾಗುವದು. ಮೋಹಿನೀ ನೀನು ಅಹಂಕಾರ ಪಡಬೇಡ. ಮೊದಲು ಸಿದ್ಧರಾಮನನ್ನು ಸೋಲಿಸು. (ಮರದ ಕೆಳಗೆ ಓದುತ್ತ ಕುಳಿತ ಸಿದ್ಧರಾಮನ ಬಳಿ ಬರುವಳು.) ಅಹ್ಹ! ಪ್ರತಿಮನ್ಮಥನೇ ಕುಳಿತಿರುವನಲ್ಲ! ಯುದ್ಧ ಪ್ರಾರಂಭವಾಗುವದಿನ್ನು! ಪ್ರಿಯಾ,ಪ್ರಿಯಾ!

ಸಿದ್ಧರಾಮಃ—(ಕಿವಿಗೊಟ್ಟು) ಓಹೋ, ಯಾವಳೋ ತಾಯಿಯು, ತನ್ನ ಪತಿಯನ್ನು ಸಂಬೋಧಿಸುತ್ತಿರುವಳು.

ಮೋಹಿಃ—[ಮುಂದೆ ಬಂದು] ನಾನು ಸಂಬೋಧಿಸುತ್ತಿರುವದು ಅನ್ಯರನ್ನಲ್ಲ! ನಿನ್ನನ್ನೇ! ಪುಣ್ಯಾತ್ಮಾ ನನ್ನಾಶೆಯನ್ನು ಪೂರೈಸಿ, ನನ್ನನ್ನು ಕೃತಾರ್ಥಳನ್ನಾಗಿ ಮಾಡಬಾರವೇ?

ಸಿದ್ಧಃ—ಏನು ತಾಯಿಾ, ನನ್ನಿಂದೇನಾಗಬೇಕು?

ಮೋಹಿಃ—ನೋಡು ನನ್ನನ್ನು—

**ಪದ—ಸಾರಂಗಿ ರಾಗ—ಆದಿತಾಳ**

**ಸೋಬಗು ಸುರಿವ, ದೇಹವನಿಂದು ಬಣ್ಣಿಪುದೆಂತು? ॥ಪ॥**
**ವ್ವೆಯುಕಾಂತಿ ಬೆಳದಿಂಗಳ ಹೊನ್ನು।**
**ಮುಯ್ಯಕಾಗಿ ಹೊರಹೊಮ್ಮುತಲಿಹುದು ॥**
**ರಮ್ಯವಾದಚಂದಿರವೊಗವು।**
**ಪ್ರಿಯವಾದ ದೇಹದ ನಿಲುವು ॥೧॥**

ಸಿದ್ಧ:—ತಾಯಿ, ನಿನ್ನ ದೇಹಸೌಂದರ್ಯವು ನಿನ್ನ ಪೂರ್ವ ಪುಣ್ಯಾಂಶದಿಂದ ಲಭಿಸಿದ್ದು, ಅದು ಎಲ್ಲರಿಗೂ ಹೇಗೆ ಸಾಧ್ಯವಾದೀತು?

ಮೋಹಿ:—ಇಂಥ ದೇಹ ಕುಸುಮವು ವ್ಯರ್ಥವಾಗಿ ಹಾಳಾಗು ತ್ತಿರುವದು; ಇದನ್ನು ಯಾವ ದೇವಾತ್ಮನಿಗೆ ಅರ್ಪಿಸಲೆನ್ನುತ್ತಿದ್ದೆ. ಅಂಥಾ ದೇವಾತ್ಮನು ಇಲ್ಲೇ ಲಭಿಸುವ ಆಶೆಯಿದೆ.

ಸಿದ್ಧ:—ತಾಯಿ, ಜಗದ್ವ್ಯಾಪಕನಾಗಿ ಪರಮಾತ್ಮನಿರುತ್ತಿರಲು ನೀನೇಕೆ ಅಲೆಯುತ್ತಿರುವೆ?

ಮೋಹಿ:—ಪ್ರಿಯಾ, ನೀನೇ ನನ್ನ ಪರಮಾತ್ಮನು! ಇಗೋ ಇವೇ ಈಗ ಅರಳಿದ ಈ ಕುಸುಮವನ್ನು ನಿನಗೆ ಸಲ್ಲಿಸುತ್ತಿರುವೆನು; ಇದನ್ನು ಸ್ವೀಕರಿಸು! ಈ ವಿಾಸಲಾದ ದೇಹಕುಸುಮವನ್ನು ಪ್ರಿಯಾ, ನಿನ್ನಂಥ ಒಟುವೇ ಸ್ವೀಕರಿಸಬೇಕಲ್ಲವೇ? ಪ್ರಿಯಾ, ಸ್ವಿಕರಿಸು ಸ್ವೀಕರಿಸು!

ಸಿದ್ಧ:—ತಾಯೀ, ನನ್ನಿಂದ ನಿನ್ನಾಶೆಯನ್ನು ಪೂರ್ತಿಗೊಳಿಸಲಿ ಕ್ಕಾಗದು.

ಮೋಹಿ:—ಪ್ರಿಯಾ, ಇದೇನು ಕಠಿನ ಕೆಲಸವೇ? ನನ್ನನ್ನು ಲಗ್ನವಾದರೆ ನನ್ನಿಷ್ಟ ಪೂರೈಸುವದು!

ಸಿದ್ಧ:—ತಾಯೀ, ನನ್ನ ಲಗ್ನವಾಗಿದೆ! ಭಕ್ತಿಯ ವರದಕ್ಷಿಣೆ ಕೊಟ್ಟು, ಆ ಪರಮಾತ್ಮನನ್ನು ವರಿಸಿರುವೆನು. ನಾನೇ ಒಬ್ಬರ ಸತಿ ಯಾಗಿರುವಾಗ ಇನ್ನೊಬ್ಬರನ್ನು ಸತಿಯನ್ನಾಗಿ ಮಾಡಿಕೊಳ್ಳುವುದೆಂತು?

ಮೋಹಿ:—ಛೀ ಛೀ. ಇದು ಯುಕ್ತಿವಾದವಲ್ಲದೆ ಸತ್ಯವಾದವಲ್ಲ! ಪೂತಾತ್ಮಾ, ನಿನ್ನಿಂದ ಅನೇಕ ಜನಗಳು ಇಷ್ಟಾರ್ಥ ಪ್ರಾಪ್ತಿಮಾಡಿ ಕೊಂಡು, ಸುಖದಿಂದ ಕಾಲಹರಣಮಾಡುತ್ತಿರುವಾಗ ನನ್ನಂಥ ಸೌಂದ ರ್ಯವತಿಯನ್ನು ಬೀಳುಗಳೆವರೇ? ಪ್ರಿಯಾ, ಇಗೋ ನನ್ನ ಬಣ್ಣದ ಬುಗುರಿಯಂಥ ಕುಚಗಳನ್ನು ಕಣ್ಣೆತ್ತಿ ನೋಡು! ಅಂದರೆ, ನಿನ್ನ ವಿಚಾರ ಪರಿವರ್ತನವಾಗುವುದು.

ಸಿದ್ಧ:—ತಾಯೀ, ತಾಯಿಯಂಥ ನಿನ್ನ ಸ್ತನಗಳು, ಹಾಲಿನ ಕಲಶಗಳೇ ಸರಿ! ಅವ್ವಾ, ಪುಣ್ಯಮಾಡಿ, ನಿನ್ನ ಹೊಟ್ಟೆಯಿಂದ ನಾನು ಹುಟ್ಟಿಬಂದಿದ್ದರೆ, ಆ ನಿನ್ನ ಸ್ತನಗಳು, ಹಾಲುಣಿಸಿ ನನ್ನನ್ನು ರಕ್ಷಿಸುತ್ತಿದ್ದವು!

ಮೋಹಿ:— ನಾಥಾ ಹಾಗನ್ನಬೇಡ. ನನ್ನ ತುಂಬಿದ ತೋಳುಗಳನ್ನು ನೋಡು; ಕುರುಡನಂತೆ ಹೀಗೇಕೆ ನಟಿಸುತ್ತೀ? ನಿನ್ನ ಕೋಮಲವಾದ ತುಟಿಗಳಿಂದ ನನ್ನನ್ನೊಮ್ಮೆ ಚುಂಬಿಸು! ನಿನಗೆ ಸವಿ ಹತ್ತಿದ್ದರೆ ಬಿಡುವಂತೆ! ಪ್ರಿಯಾ ನಿನ್ನ ಪುಟ್ಟ ಪುಟ್ಟ ಹಲ್ಲುಗಳಿಂದ ಪಾಡುಮಾವಿನಂಥ ನನ್ನ ಕಪೋಲವನ್ನು ಕುದುಕು! ನನ್ನರಗಿಳಿಯೇ ಪಾಡುಗಾಯಿಯ ಮಾಸಲುಮುರಿ! ಎಂಜಲು ಮಾಡಿ ಬಿಡು; ನಾನು ಧನ್ಯಳಾಗುವೆನು. ನೀನೇ ಇಲ್ಲಿಯ ವರೆಗೆ ಬಂದು, ಕದುಕಲಿಕ್ಕೆ ಶ್ರಮವಾಗುತ್ತಿದ್ದರೆ, ನಾನೇ ನಿನ್ನ ಮುಖದ ಬಳಿ ಬರುವೆನು. [ಸನೀ ಹೋಗುವಳು ]

ಸಿದ್ಧ:—ಎಲೇ ಮಾಯೇ ದೂರಾಗಿ ನಿಲ್ಲು!

**ಪದ—ಧಾಟಿ—“ ಪರಮ ಮಂಗಳಧಾಮ ” ಎಂಬಂತೆ.**

**ಎನಿತು ಕಾಮನಕ್ರೌರ್ಯ, ಎನಿತು ಕಾಮುಕ ಗುಣವು ॥ ಪ ॥**
**ಮನದೆರೆಳೆ, ಕಾಮಶರಜಾಲದಲಿ ಸಿಲ್ಕಿಹುದು ॥**
**ಕನವರಿಸಿ ಈ ಜಾಲೆ ಮಿಡುಕುತಿಹುದು ॥ ೧ ॥**

**ಈ ಲೀಲೆಮಾಯೆಯದು! ಕೊಲ್ಲುವುದು ಮಾನವರ।**
**ಸೋಲಿಸಲು ಕಾಮಾರಿ ನೆಲೆಹಿಸಹನು, ಶಂಕರ ॥ ೨ ॥**

ನನ್ನನ್ನು ಮುಟ್ಟದಿರು. ಪಾಪೀ, ಕಾಮಾಗ್ನಿಯನ್ನು ಹೊತ್ತಿಸುತ್ತ ಜಗತ್ತನ್ನೇ ಪ್ರಳಯ ಮಾಡುವ ಮಾಯೇ, ನಿನ್ನಾಟವಿಲ್ಲಿ ನಡೆಯದು ತಿಳಿದಿರು!

ಮೋಹಿ:—ನನ್ನಾಟವೇನು ಪ್ರಿಯಾ?

ಸಿದ್ಧಃ—ಇದೋ ತಾಯೀ, 'ಪ್ರಿಯಾ, ನಾಥಾ' ಎಂದು ಸಂಬೋಧಿಸಬೇಡ; ನಿನ್ನ ನಮಿಸುತ್ತೇನೆ.

ಮೋಹಿಃ— ಬಿಟ್ಟೆ. ನಿನಗೆ ಬೇಸರಗೊಳಿಸುವ ಶಬ್ದಗಳನ್ನು ಇನ್ನೊಮ್ಮೆ ಉಚ್ಚರಿಸಿದರೆ, ನನ್ನ ನಾಲಿಗೆಯು ಸೇದಿ ಹೋಗಲಿ! ಬಾ, ಇನ್ನಾದರೂ ನನ್ನನ್ನು ಸಮಾಧಾನ ಪಡಿಸು!

ಸಿದ್ಧಃ—ಛೀ ಏನು ದುರ್ವಿಕಾರವಿದು? ತಾಯೇ, ನನ್ನ ಮಾತು ಕೇಳು. ಇಂಥ ಮಾಂಸದ ಮುದ್ದೆಯನ್ನು ಮೋಹಿಸುವ ಹುಚ್ಚನು ನಾನಲ್ಲ! ಶಾಶ್ವತ ಸುಖದ ಧ್ವಜವನ್ನೆತ್ತಿದ ಈ ವೀರಪುಂಗವನ್ನು ಇಂಥ ಕ್ಷಣಿಕ ಸುಖವನ್ನು ಕಾಲಿಂದೊರಿಸುತ್ತ ಹೊರಟಿರುವನು. ನಾನು ಮೇಲಿನ ಸೌಂದರ್ಯವನ್ನು ಪ್ರೀತಿಸೆನು; ಸತ್ತು ಮಣ್ಣಾಗಿ ಹೋಗುವ ದೇಹವನ್ನು ನಾನು ನಂಬುವದಿಲ್ಲ. ತಾಯಿ, ಮರಣವು ನಿನ್ನ ಚಲುವಿಕೆಯ್ನು ನುಂಗುವದಕ್ಕೆ ಹೊಂಚು ಹಾಕಿ ಕುಳಿತಿರುವುದನ್ನು ನೀನೇನು ಬಲ್ಲೆ? ಮುಪ್ಪಿನ ಮೋಡಿಮಾಟವು ನಿನ್ನ ಸ್ವರೂಪ ನಾಶ ಮಾಡಲಿರುವುದು ಬಲ್ಲೆಯಾ?

ಮೋಹಿಃ—ಹುಚ್ಚಾ, ನಿನಗೆಷ್ಟೂ ಬುದ್ಧಿಯಿಲ್ಲ! ಪಾಪ, ಈ ಅಬಲೆಯನ್ನು ಸಂಕಟದಿಂದ ಮುಕ್ತ ಮಾಡಲೊಲ್ಲೆ! ಷಂಢಾ, ನಿನ್ನಂಥ ಪುರುಷರು ಜಗತ್ತಿಗೆ ಭಾರ ಕಂಡೆಯಾ? ಅಯ್ಯೋ ತಾಳೆನು, ತಾಳೆನು! ಈ ಕಾಮಬಾಧೆಯನ್ನು ತಾಳೆನು. ಸಿದ್ಧಾ, ಇದೊಂದು ಕಡೆಯ ಸಲ ಕೇಳುತ್ತೇನೆ. ಬಾ—ಇನ್ನೊಮ್ಮೆ ಕೇಳುತ್ತೇನೆ; ನನ್ನನ್ನು ತೃಪ್ತಿಗೊಳಿಸು—ಬರುವದಿಲ್ಲವೇ? ಹಾಗಾದರೆ ಸತ್ತೆನು-ಸತ್ತೆನು [ನೆಲಕ್ಕೆ ಬಿದ್ದು] ಮೂಢಾ, ನಾನು ಸತ್ತ ಮೇಲೆ ಭೂತವೇತಾಳವಾಗಿ ನಿನ್ನನ್ನು ಹಿಂಸಿಸುತ್ತೇನೆ. [ಮೂರ್ಛೆಯಾಗುವಳು.]

ಸಿದ್ಧಃ—ಅಹ್ಹಾ! ಈ ಪ್ರಾಣಿಯು ನೆಲವನ್ನೆ ಹಿಡಿಯಿತಲ್ಲ! ಎಲೋ ಕಲ್ಲೆದೆಯ ಕಟುಕಾ, ಕಾಮಾ, ಲಕ್ಷ್ಮೀಪುತ್ರನೆಂದು ಈ ಅಬಲೆ

ಯನ್ನು ಗೋಳಾಡಿಸುವಿಯಾ? ಜಗತ್ತನ್ನೆ ರಕ್ಷಿಸುವ ವಿಷ್ಣುವಿನ ಮಗನೆನಿಸಿಕೊಂಡು, ಇಂಥ ಹಿಂಸೆಯನ್ನು ಮಾಡಬಹುದೇ?

**ಪದ—ಧಾಟಿ— 'ಕಾಂತೆಮನದೊಳ್ ಚಿಂತೆ'**

**ಎನಿತು ಮರುಗುವಳಯ್ಯೋ— ಅಬಲೆ ।**
**ಅನಿಮಿಷಸುಖವನು ಬಯಸುವಳಯ್ಯೊ ॥ಪ॥**

**ತೋರಿಸು ಕೃಪೆಯ ದೀನದಯಾಳು ।**
**ಹಾರಿಸು ಮೋಹವ, ನಿರ್ಗುಣದೇವಾ ॥೧॥**

ಇನ್ನು ಈಕೆಯನ್ನು ಬದುಕಿಸುವುದೆಂತು? (ವಿಚಾರ) ತಾಯೀ, ನಿನ್ನನ್ನು ಕಾಮಬಾಧೆಯಿಂದ ಉಳಿಸುತ್ತೇನೆ; ಸಾವಧಳಾಗು!

ಮೋಹಿ—(ಕೇಳಿ ತಟ್ಟನೆ) ಏನು, ಕಾಮಬಾಧೆಯಿಂದ ನನ್ನನ್ನು ಉಳಿಸುತ್ತೀಯಾ? ಇದರಲ್ಲಿ ಮೋಸವಿಲ್ಲವಷ್ಟೇ?

ಸಿದ್ಧ—ಛೀ, ಛೀ, ಮೋಸದ ಲೇಶವನ್ನೂ ಅರಿಯೆ! ಅಬಲೆಯನ್ನು ಮೋಸಗೊಳಿಸಿ ನಾನಾವ ಗತಿಗಾಣಲಿ? ತಾಯೀ, ನಾನು ಹೇಳುತ್ತಿರುವುದನ್ನು ಲಕ್ಷ್ಯವಿಟ್ಟು ಕೇಳು. ಬೆಂಕಿಯನ್ನು ನೊಂದಿಸಲಿಕ್ಕೆ ಎಣ್ಣೆಸುರುಹಲಾಗದಷ್ಟೇ? ಎಳೆಯುತ್ತಿರುವ ಕಾಮನ ಬೆನ್ನು ಹತ್ತಿದರೆ, ಅವನ ಶಕ್ತಿಯು ಕಡಿಮೆ ಆಗದು; ಬಿಗಿಹಿಡಿದು, ಅವನೊಡನೆ ಕಾದಾಡಿದರೆ ಕಾಮಬಾಧೆ ಪರಿಹಾರವಾಗುವದು!

ಮೋಹಿ—ಅಯ್ಯೋ ಇದೇ ಜಂಜಾಟವೇ ನಡೆಯಿತಲ್ಲ!

ಸಿದ್ಧ—ತಾಯೀ, ನೀನು ಹಾಗೆ ಎಂದೂ ತಿಳಕೊಳ್ಳಬೇಡ. ಕಾಮಬಾಧೆಯನ್ನು ಪರಿಹರಿಸುವ ಉಪಾಯವನ್ನೇ ಉಸುರುವೆನು. ಮನದಲ್ಲಿ ಮನೆಮಾಡಿದ ಕಾಮನನ್ನು ಓಡಿಸಬೇಕಾದರೆ, ಕಾಮಾರಿಯಾದವನನ್ನು ಹೃದಯಮಂದಿರದಲ್ಲಿ ಪ್ರಸ್ಥಾಪಿಸಬೇಕು; ಆ ಶಿವನು, ಕಾಮನನ್ನು ಓಡಿಸುವನಲ್ಲದೆ ಆತ್ಮಿಕಶಾಂತಿಯನ್ನೂ ಕೊಡ

ಬಲ್ಲನು. ಇದು ನಿಶ್ಚಯ! ಜಗತ್ತಿನೊಳಗಿನ ಸ್ತ್ರೀಯರೆಲ್ಲ ನನಗೆ ಅಕ್ಕ ಅವ್ವಗಳಂತೆ ಕಾಣಿಸುತ್ತಿರುವರು. ಅಂಥ ನಾನು, ಕಾಮ ಬಾಧೆಯ ಪರಿಹಾರೋಪಾಯವನ್ನು ಇದರ ಹೊರತು, ಮತ್ತೊಂದನ್ನರಿಯೆನು ಇದು ನಿನಗಿಷ್ಟವಾದರೆ ಸ್ವೀಕರಿಸು.

ಮೋಹಿ:—ಸಿದ್ಧೇಶಾ, ನಿನ್ನ ಉಪದೇಶಕಾರಣಗಳಿಂದ ನನ್ನ ಕಾಮಾಂಧಕಾರವು ಕರಗಿತು; ನಿನ್ನ ದಿವ್ಯವಾಣಿಯು, ನನ್ನ ಹೃದಯಾತ್ಮನನ್ನೆಚ್ಚರಿಸಿತು! ನಿನ್ನುಪಕಾರವನ್ನೆಂದಿಗೂ ಮರೆಯೆನು. ನೀನು ನನ್ನ ಪತಿಯಾಗಿ, ನನ್ನ ಜನ್ಮಸಾಫಲ್ಯಗೊಳಿಸು!

ಸಿದ್ಧ:—[ಮನ] ಅಹ್ಹ! ಮತ್ತೂ ಬಿಡವೊಲ್ಲದಲ್ಲ ಮೋಹವು.

ಮೋಹಿ:—ಗುರುದೇವಾ, ನನ್ನ ನುಡಿಗೆ ಬೆಚ್ಚ ಬೇಡ. ಪಾರಲೌಕಿಕ ಮಾರ್ಗದಲ್ಲಿ ಕೈಕೊಟ್ಟು, ಉನ್ನತಿಗೊಯ್ಯುವ ಪತಿಯು, ನೀನಲ್ಲದೆ ನನಗಿನ್ನಾರು? ನನ್ನನ್ನನುಗ್ರಹಿಸು.

ಸಿದ್ಧ:—ಅವ್ವಾ, ನಿನ್ನ ಜ್ಞಾನನೇತ್ರವು ನಿನ್ನ ಪೂರ್ವಪುಣ್ಯಾಂಶದಿಂದ ತೆರೆದಿದೆ; ಇದೇ ಸಮಯಕ್ಕೆ ನೋಡು. ನಿನ್ನ ಹೃದಯಮಂದಿರದಲ್ಲಿ ನೆಲೆಸಿದ ಆತ್ಮದೇವನನ್ನು ನೋಡು. ಆತನೇ ಪರಾತ್ಪರನಾದ ಪರಶಿವನು. ಆತನಿಂದಲೇ ನಿನ್ನ ಜೀವನ್ಮುಕ್ತಿಯು!

ಮೋಹಿ:—[ಕೈಮುಗಿದು] ದೇವಾ, ಯಾವ ಪಾಪಸಂಕಲ್ಪದಿಂದ ಬಂದು, ಎಂಥ ಪುಣ್ಯದರಾಸಿಯನ್ನು ಪಡೆದೆನಲ್ಲ? ಗುರುವೇ, ಈ ಅಬಲೆಯ ಆ ನೀಚಪ್ರವೃತ್ತಿಯು ಈಕೆಯ ಸ್ವಂತಬುದ್ಧಿಯಿಂದ ಉಂಟಾದ್ದಲ್ಲವಾದರೂ ನಾನು ದೋಷಿಯೇ ಸರಿ; ಹೇಗಾದರೂ ನನ್ನ ವಾಂಛಿತವು ಸಫಲವಾಯ್ತು. ಸಜ್ಜನರೊಡನೆ ಕಡಿದಾಡಬಹುದಾದರೂ, ದುರ್ಜನರ ಗೆಳೆತನ ಬೇಡವೆನ್ನುವುದರ ಅನುಭವವು ಇಂದೆನಗೆ ಚೆನ್ನಾಗಿ ಬಂತು— ಸಿದ್ಧೇಶಾ—

ಪದ—ಧಾಟಿ—'ಏನು ವಚಿಸುತಿರುವಿಯೋ '

ಗುರುವರಾ, ಸಾರ್ಥಮುಮಜನ್ಮವು ।
ಸಿದ್ಧಃ— ನರರಿಗೆ ಈ ಪಥಯೋಗ್ಯವು ॥ಪ॥
ಮೋಹಿ:— ನಾನಾದಿನು ಘನಪಾವನಳಿಂದು ।
ಜ್ಞಾನಾಗ್ನಿಯು ನೆರೆಶುದ್ಧಿಸಿತಿಂದು ॥
ಸಿದ್ಧಃ— ಲೀಲೆಯು ನಾಯಕ ಪರಿವನಲ್ತೆ ।
ಜಾಲವಹರಿಯುವ ವೀರನೆ ಅಲ್ತೆ ॥
ಮೋಹಿ:— ಬೆಳಗಿದೆ-ಮನವನು, ಮಾನ್ಯವು ॥ ೧ ॥

ಸಿದ್ಧಃ—ತಾಯೀ, ಇಗೋ ಈ ಶಿವನ ಕುರುಹನ್ನು! (ದಂಡಕೋಲುಕೊಡುವನು.) ಇದರಿಂದ ನಿಜಸುಖಪಡೆ.

ಮೋಹಿಃ—(ವಂದಿಸಿ) ಗುರುದೇವಾ, ನಾನು ಪುನೀತಳಾದೆ.

ಸಿದ್ಧಃ—ಅಮ್ಮಾ ಇನ್ನು ಹೋಗಿ ಬಾ. [ಹೋಗುವಳು.] ಏನು ವಿಚಿತ್ರ ಸಂಘಟನೆಯಿದು? (ಹೋಗುವನು.)

## ಷಷ್ಠ-ಪ್ರವೇಶ.

[ಬೀದಿಯಲ್ಲಿ ವಿಶ್ವಾಸ-ವಿನಾಯಕರು]

ವಿಶ್ವಾಃ—ವಿನಾಯಕರಾಯರೇ ಈಗ ಮಾತ್ರ ನಮ್ಮ ಅಪಮಾನದ ಪರಮಾಧಿಯು ಪ್ರಾಪ್ತವಾಯ್ತು; ಈಗ ನಾವು ತಕ್ಕ ಪ್ರತೀಕಾರ ಮಾಡಬೇಕು. ಇಲ್ಲವೆ, ವಿಷಪ್ರಾಶನ ಮಾಡಿಸತ್ತುಹೋಗಬೇಕು. ಆಒಕ್ಕಲಿಗನ ಮಗನು, ಗೋಹಟ್ಟಿಯಲ್ಲಿ ಆಶ್ರಮವೊಂದನ್ನು ಮಾಡಿಕೊಂಡಿದ್ದುದು, ನಮ್ಮ ಮೂಗು ಕೊಯ್ದು ಕೈಯಲ್ಲಿ ಕನ್ನಡಿ ಕೊಟ್ಟಂತಾಗಿದೆ.

ವಿನಾ:— ಆ ಅವಮಾನವು ಕಾಳಕೂಟ ವಿಷವಾಗಿ ನನ್ನೆದೆಯನ್ನು ದಹಿಸುತ್ತಲೇ ಇದೆ. ಏನು ಮಾಡಲಿ? ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯಲ್ಲಿದ್ದರೆ..." ಎಂಥೆಂಥ ಮಹನೀಯರುಗಳಾದ ಯೋಗಿಗಳಿಗೆ ಆಶ್ರಮ ಮಾಡಿಕೊಂಡಿರುವುದು, ಅಸಾಧ್ಯವಾಗಿರುವಾಗ ಈ ಶೂದ್ರನು ಹೀಗೆ ವರ್ತಿಸಹತ್ತಿದ್ದು ಧರ್ಮಗ್ಲಾನಿಯ ಪೂರ್ವ ರಂಗವೇ ಸರಿ.

ವಿಶ್ವಾ:— ಮಲ್ಲಿಕಾರ್ಜುನನ ಗುಡಿಯು ನೋಡು ನೋಡುವವರ ಲ್ಲಿಯೇ ಸಿದ್ಧವಾಗಿ ಕುಳಿತಿತು! ನಾವೆಲ್ಲ ಜೀವನ್ಮೃತರೇ ಅಲ್ಲವೇ? ಆ ಗುಡಿಯು, ನಮ್ಮ ಗೋರಿಯ ಮೇಲೆಯೇ ಕಟ್ಟಿಸಿದಂತಾಯ್ತು!

ವಿನಾ:— ಹೀಗೆ ನಾವು, ನಿದ್ರಾಪರವಶರಾಗಿ ಬಿಟ್ಟರೆ ನಮ್ಮ ಗಣೇಶಪಂಥವು ಮಧ್ಯಾಹ್ನದ ಮಂಜಿನಂತೆ ಕರಗಿ ಹೋಗೋದರಲ್ಲಿ ಸಂಶಯವೇನು?

ವಿಶ್ವಾ:— ಈಗ ಹನ್ನೆರಡು ದಿನವಾಯ್ತು, ಹಗಲಿರುಳು ವಿಚಾರ ಮಾಡಿಮಾಡಿ ತಲೆಕೆಟ್ಟು ಹೋಗಿದೆ.

ವಿನಾ:— ಯಾವ ವಿಚಾರ?

ವಿಶ್ವಾ:— ಇದೇ ವಿಚಾರ! ಆ ಮೂರ್ಖ ಮಂಡಳಿಯನ್ನೆಲ್ಲ ಪಾರು ಪತ್ಯ ಮಾಡುವುದು! ಧರ್ಮರಕ್ಷಕರಾದ ನಾವು ಧರ್ಮದ ಹೆಸರು ಮುಂದೆ ಮಾಡಿಯೇ ನಮ್ಮ ಕಾರ್ಯಸಾಧಿಸಿಕೊಳ್ಳುವುದು ವಿಹಿತವ ಲ್ಲವೇ?

ವಿನಾ:— ಈಗ ನಿನ್ನ ವಿಚಾರಾಶ್ವವು ಎಲ್ಲಿಗೆ ಬಂದಿದೆ?

ವಿಶ್ವಾ:— ಅದು ಕೇವಲ ನನ್ನ ವಿಚಾರವೇ ಅಲ್ಲ! ನಮ್ಮ ನಿಮ್ಮ ಎಲ್ಲ ಸನಾತನ ಧರ್ಮದವರ ವಿಚಾರವಾಗಿದೆ! ನಿಮಗೆ ಅಭಿಮಾನವಿ ಲ್ಲವೋ? ನಿಮ್ಮ ವಂಶಾನುವಂಶದ ಪವಿತ್ರ ಧರ್ಮಧ್ವಜವು ಇಂದು ಮುರಿದು ಬೀಳುತ್ತಿರುವಾಗ, ನಾವೆಲ್ಲ ಕಣ್ಮುಚ್ಚಿಕೊಂಡು ಕುಳ್ಳಿರಬೇಕೇ? ನೀವೆಲ್ಲರು ನಿಮ್ಮ ರಕ್ತವನ್ನೆಲ್ಲ ಈ ಸತ್ಕಾರ್ಯಕ್ಕಾಗಿ ಬಸಿಯಲು, ಸನ್ನ

ದ್ಧರಾದಾಗಲೇ ನಮಗೆ ವಿಜಯ. ಹೀಗೆಂಬುದರ ವಿಚಾರ ನಿಮ ಗುಂಟೆ?

ವಿನಾ:—ವಿಶ್ವಾಸರಾಯರೇ, ಈ ಕಾರ್ಯಕ್ಕೆ ನಾನು ನಮ್ಮ ಜನರೊಡನೆ ನಿಮಗೆ ಸಹಾಯಕನಾಗುವೆನು! ಆಯ್ತೇ?

ವಿಶ್ವಾ:—ವಚನಕೊಡಿ.

ವಿನಾ:—(ಕೈಮುಟ್ಟಿ) ಈ ಸತ್ಕಾರ್ಯದಲ್ಲಿ ನಿನ್ನನ್ನು ಹಿಂಬಾಲಿಸುವೆವು; ನಿನ್ನ ಮಾರ್ಗವು ನ್ಯಾಯವಾದುದಿದ್ದರೂ ಸರಿ, ಅನ್ಯಾಯವಾದದ್ದಿದ್ದರೂ ಸರಿ!

ವಿಶ್ವಾ:—ಭಲೇ ವೀರಾ! ಈಗ ನಾನು ಮಾಡಿದ ವಿಚಾರ ಕೇಳು!

ವಿನಾ:—ಇಂಥಾ ವೇದಬಾಹಿರವಾದ ಆಚಾರದ ಮೊಳಿಕೆಯನ್ನು, ಕಿತ್ತಿಯೊಗೆಯಲೇ ಬೇಕು. ವಿಶ್ವಾಸರಾವ್, ನೀವು ಪ್ರತಿ ಶಂಕರಾಚಾರ್ಯರೇ ಸರಿ. ಬೌದ್ಧಧರ್ಮವನ್ನು ದೇಶಬಿಟ್ಟೋಡಿಸಲು, ಶಂಕರಾಚಾರ್ಯರು ನಡುಗಟ್ಟಿದಂತೆ, ನೀವಾದರೂ ಸನ್ನದ್ಧರಾದುದನ್ನು ನೋಡಿ- 'ಯದಾ ಯದಾ ಹೀ ಧರ್ಮಸ್ಯಗ್ಲಾನಿರ್ಭವತಿ....'

ವಿಶ್ವಾ:—ಸಾಕು ಬಿಡಿ ವಿನಾಯಕರಾಯರೇ, ಕಾರ್ಯಪೂರ್ತಿಯಾಗುವ ವರೆಗೆ ನನಗೆ ಯಾವ ಮರ್ಯಾದೆಯೂ ಬೇಕಿಲ್ಲ.

ವಿನಾ:—ಮಹಾತ್ಮರ ಲಕ್ಷಣವೇ ಇದು! ಒಳ್ಳೇದು ನಿಮ್ಮ ಕಾರ್ಯಸಾಧನದ ಮಾರ್ಗವನ್ನು ಹೇಗೆ ಹೇಗೆ ರೂಪಿಸಿರುವಿರಿ?

ವಿಶ್ವಾ:—ನನ್ನ ವಿಚಾರವು ನಿನಗೆ ಹಾಸ್ಯಾಸ್ಪದವಾಗಿಯೂ ಪರಿಣಮಿಸಬಹುದು. ಆದರೆ ಕಾರ್ಯಸಾಧನೆಗಾಗಿ 'ಬಹುಕೃತ ವೇಷಂ'! ನಮ್ಮ ಗಣೇಶ ದೇವಾಲಯದೊಳಗಿನ ಮೂರ್ತಿಯನ್ನು ಕಿತ್ತೊಯ್ದು, ಆ ಮಲ್ಲಿಕಾರ್ಜುನನ ಗುಡಿಯಲ್ಲಿಡಬೇಕು!!

ವಿನಾ:- ಏನು ರಾಯರೇ, ಇದೆಂಥ ಸಾಹಸ?!

ವಿಶ್ವಾಃ—ಈ ಸಾಹಸವು ಆಶ್ಚರ್ಯಕರವಾದದ್ದೇ ಸರಿ! ಆದರೆ, ನಾವು ಬಹುಪರಿಯಿಂದ ವಿಚಾರಿಸಬೇಕು. ಈ ಮೂರ್ತಿಯೊಂದನ್ನು ಕಿತ್ತಿ, ಈ ಕಾರ್ಯಸಾಧಿಸುವದಾಗದಿದ್ದರೆ, ನಾಳೆ ಅದೇ ಶೂದ್ರರು ಪ್ರಬಲರಾಗಿ ನಮ್ಮ ಸಕಲ ಮೂರ್ತಿಗಳನ್ನೆಲ್ಲ ಕಿತ್ತೊಗೆದು ಧ್ವಂಸ ಮಾಡುವರೆಂಬದನ್ನು ಧೂರ್ತರಾದ ನಿಮಗೆ ತಿಳಿಸಿ ಹೇಳಬೇಕು?

ವಿನಾಃ—ಒಳ್ಳೇದು, ಮೂರ್ತಿಯಸ್ಥಾನತ್ಯಾಗದ ಕಾರ್ಯಕ್ಕೆ ಯಾರು ನಿಯಮಿತರಾಗಿದ್ದಾರೆ?

ವಿಶ್ವಾಃ—ಯಾರು ಏಕೆ? ಇಂಥ ಹೊಣೆಗಾರಿಕೆಯ ಕೆಲಸವನ್ನು ನಾನು, ಇತರರಿಗೆ ಎಂದೂ ಹೇಳಲಾರೆನು; ಇಂಥ ವಿಷಯಗಳಲ್ಲಿ ನನಗೆ ಯಾರ ಮೇಲೂ ವಿಶ್ವಾಸವಿಲ್ಲ!

ವಿನಾಃ—ನಮಗೆ ಒಪ್ಪಿಸುವ ಕಾರ್ಯಭಾಗವಾದರೂ ಯಾವುದು?

ವಿಶ್ವಾಃ—ಮೂರ್ತಿ ಶೋಧನೆಗಾಗಿ, ಸಿದ್ಧರಾಮನ ಆಶ್ರಮವನ್ನು ಹೊಕ್ಕು, ಚೌರ್ಯವನ್ನು ಸ್ಫೋಟಮಾಡಿ, ಅವಮಾನಮಾಡಿ ಬಿಡೋಣ. ಈ ಸಂಧಿಯಲ್ಲಿ ಶಾರೀರಬಲದ ಉಪಯೋಗವನ್ನಾದರೂ ಮಾಡುವ ಪ್ರಸಂಗ ಬರಬಹುದು! ಅದಕ್ಕೆ ನೀವೆಲ್ಲಾ ಸನ್ನದ್ಧರಾಗಿರತಕ್ಕದ್ದು! ತಿಳಿಯಿತೇ?

ವಿನಾಃ—ನಿಶ್ಚಯವಾಗಿ! ನಿಸ್ಸಂಶಯವಾಗಿ!!

ವಿಶ್ವಾಃ—ಒಳ್ಳೇದು ಹೋಗಿ ಬರುತ್ತೇನೆ. ಪ್ರಸಂಗಾನುಸಾರವಾಗಿ ಈ ವಿಚಾರದಲ್ಲಿ ಕೊಂಚ ಪರಿವರ್ತನೆಯೂ ಆಗಬಹುದು. ಆಗ ವ್ಯವಹಾರ ಬುದ್ಧಿಯನ್ನು ಉಪಯೋಗಿಸಿದರೆ, ಮುಸುಕಿದ ಕತ್ತಲೆಯು ಹರಿಯುವದು. (ಹೋಗುವರು.)

# ಸಪ್ತಮ-ಪ್ರವೇಶ.

—॰॰—

(ಆಶ್ರಮದಲ್ಲಿ ಸಿದ್ಧರಾಮನು ಶಿಷ್ಯರೊಡನೆ)

ಸಿದ್ಧ:— ಅಹ್ಹ, ಎಂಥಾ ಪ್ರಶಾಂತವಾದ ಸಮಯವಿದು ?

ಪದ— ಬಾಗೇಸರಿರಾಗ— ಝಂಪಾತಾಳ.

ಏನು ಸೊಗಸಿನ ಸೆಲೆಯು ಏನು ಶಾಂತಿಯ ನೆಲೆಯು ॥ ಪಲ್ಲ॥
ಮನಶುಕವು ಭಕುತಿಯ ಪಕ್ಕಗಳನು ತೆರೆದು।
ಸ್ವಾನಂದದಾಕಾಶದೊಳಗೆ ॥
ಎನಿತು ಸೊಗಸಿಂ ನೆಗೆದು, ಹಾರುತಿರುವುದು ! ನೋಡು !
ಚಿನುಮಯನ ಸೊಗಸು ಸವಿಬೀಡು ॥

(ಗುರುಕೇದಾರ ಮತ್ತು ಕಲ್ಲಿದೇವ ಇವರು ಬಂದೆರಗುವರು.)

ಗುರು:— ಸ್ವಾಮೀ, ಇಂಥ ಪ್ರಶಾಂತವಾದ ಸಮಯದಲ್ಲಿ ಉಪದೇಶಾಮೃತವನ್ನೀಂಟಿಸಿ, ಈ ದೀನರನ್ನು ಧನ್ಯರನ್ನಾಗಿ ಮಾಡಬೇಕು.

ಸಿದ್ಧ:— ಗುರುಕೇದಾರ, ನಾನು ಹೇಳುವೆನೆಂದರೆ ಅದೊಂದು ಅಹಂಕಾರವೆಂದು ತಿಳಿ. ನನ್ನಂಥವನು ಏನು ಹೇಳಿಯಾನು. ನಾನು ಆತನ ಆಳು; ಆತನು ನುಡಿಸಿದಂತೆ ನುಡಿದು, ನಡೆಸಿದಂತೆ ನಡೆಯುವವ.

ಕಲ್ಲಿದೇವ:— ನುಡಿಸಿದರೆ ನುಡಿಯುವವರು ನೀವು, ನಡೆಸಿದರೆ ನಡೆಯುವವರು ನೀವು ! ಆದರೆ ನೀವು ಹೇಳುವುದು ಅಹಂಕಾರವೆಂತು ?

ಸಿದ್ಧ:— ಶಿಷ್ಯಭಾವದಿಂದ ನಾನು ಮಾಡುವುದು ಸೇವೆಯೆನಿಸುತ್ತೆ. ನಾನು ಸದಾಶಿಷ್ಯನಾಗಲಿ, ನಾನು ಸದಾಸೇವಕನಾಗಲಿ, ದೀನದರಿದ್ರರ ಆಳಾಗಲಿ ! ನನ್ನ ಪರಮಾತ್ಮನು ನನಗಿದನ್ನೇ ಅನುಗ್ರಹಿ

ಸಲಿ. ದೇವರು ಸೂರ್ಯಚಂದ್ರ — ಅಗ್ನಿವಾಯುಗಳನ್ನೆಲ್ಲ ನಿರ್ಮಿಸಿ, ಅವುಗಳ ಸಹಾಯದಿಂದ, ತಾನು ನಿರ್ಮಿಸಿದ ತನ್ನ ಮಕ್ಕಳಾದ ಮಾನವ ಕೋಟಿಯ ಸೇವೆಯನ್ನೇ ಮಾಡುತ್ತಿಲ್ಲವೇ? ಒಡೆಯನು, ಓಡಾಡಿ ಕೆಲಸ ಮಾಡುತ್ತಿರುವಾಗ ಆಳುಗಳಾದ ನಾವೂ ನಮ್ಮಿಂದಾದಷ್ಟು ಆತ ನಿಗೆ ನೆರವಾಗಬೇಕು. ಬಡವರನ್ನು ಗೋಳಾಡಿಸಿ, ದೀನರನ್ನು ತುಳಿದು ವ್ರತನಿಯಮ-ಜಪತಪಾದಿಗಳನ್ನು ಮಾಡುತ್ತಾರಲ್ಲ. ಅವರು ಮಾಡು ವುದು ಧರ್ಮವೆನ್ನಬಹುದೇ? ಆಗದಾಗದು! ವ್ರತನಿಯಮ-ಜಪ ತಪಾದಿಗಳೇ ಮನುಷ್ಯನ ಧ್ಯೇಯವಲ್ಲ. ಅವು ಬರಿ ಸಾಧನಗಳು. ಅಂಥ ಸಾಧನಗಳು, ಯಾವನಲ್ಲಿ ಸತ್ಯ-ಪರೋಪಕಾರ-ದಯೆಗಳನ್ನು ಮೊಳೆಯಿಸುವವೋ, ಅವನಲ್ಲಿ ಸಾರ್ಥಕ ಹೊಂದಿದಂತಾಗುವದು. ವ್ರತನಿಯಮಾದಿಗಳಲ್ಲಿ ಒಂದೆರಡು ಲೋಪವಾದರೂ ಚಿಂತೆಯಿಲ್ಲ; ನೀತಿ-ಸದಾಚರಣೆಗಳಿಗೆ ಭಂಗಬರಲಾಗದು.

ಗುರು:—ವ್ರತನಿಯಮಗಳಿಂದ ಮನೋದೌರ್ಬಲ್ಯವೂ, ದುರ್ವಿ ಕಾರವೂ ಅಳಿಯಬಹುದಲ್ಲವೇ?

ಸಿದ್ಧ:—ಆದರೆ, ಭಕ್ತಿಜ್ಯೋತಿಯು ಹೃದಯಮಂದಿರದಲ್ಲಿ ಬೆಳ ಗಿದರೆ, ಎಲ್ಲ ಕತ್ತಲೆಗಳೂ ಕರಗಿ ಹೋಗುವವು. ಆಂತರಿಕ ಭಕ್ತಿಯಿಂದ ಸಕಲಶಕ್ತಿಗಳೂ ಉಂಟಾಗುವವು; ಅಂಥ ಭಕ್ತಿವಂತರಿಗೆ ವ್ರತನಿಯ ಮಾದಿಗಳು ರುಚಿಸಲಾರವು. ಭಕ್ತಿ ಮಾರ್ಗದಲ್ಲಿ ನಡೆಯುವರಲ್ಲಿ ಆರಂಭದವರ ಆಚರಣೆಯು, ಮುಂದಾದವರ ಆಚರಣೆಯಿಂದ ತೀರ ಭಿನ್ನವಾಗಿರುತ್ತದೆ. ಭಕ್ತಿಯೊಂದು ಜೀವನ ರಹಸ್ಯವು! ಸಂಸಾರ ಸಾಗರವನ್ನು ದಾಟಿಸಲಿಕ್ಕೆ ಭಕ್ತಿಯು ಹಡಗದಂತಿರುವದು; ಭಕ್ತಿಯು ಅಧರ್ಮದ ಕೊಳಗುಳದಲ್ಲಿ ಕರವಾಳವಾಗುವದು; ಅಜ್ಞಾನವೆಂಬ ಮದಗಜಕ್ಕೆ ಅಂಕುಶವಾಗುವುದು! ಅಹ್ಹ! ಭಕ್ತಿಯ ಬೆಳಕನ್ನೆಷ್ಟು ಬಣ್ಣಿಸಲಿ!! ಅದನ್ನು ಕಂಡವನಿಗೇ ಗೊತ್ತು ಅದರ ಸೊಬಗು.

(ವಿಶ್ವಾಸರಾಯ, ವಿನಾಯಕರಾಯ ಕೆಲವು ಸಂಗಡಿಗರು ಬರುವರು)

ಕಲ್ಲಿಃ—ಇತ್ತ ಬನ್ನಿ! ಮೇಲೆ ಕುಳಿತುಕೊಳ್ಳಿರಿ. (ಮನ) ನಮ್ಮ ಕಾರ್ಯಗಳನ್ನೆಲ್ಲ ಹಳಿಯುವವರು ಇಲ್ಲಿಗೆ ಬಂದುದಕ್ಕೆ ಕಾರಣವೇ ನಿರಬೇಕು. ಸಿದ್ಧರಾಮನ ವಿಷಯವಾಗಿದ್ದ ಶಿಲ್ಪಿಷವು ತೊಳೆದದ್ದರಿಂದ ಬಂದಿರಬೇಕು. ಇಲ್ಲವೆ, ಏನಾದರೂ ವಾದವಿವಾದದ ಪ್ರಸಂಗವಿರ ಬೇಕು ಇವೆರಡಲ್ಲದೆ ಮತ್ತೊಂದು ಕಾರಣವಾದರೂ ಇದ್ದೀತು.

ವಿಶ್ವಾಃ—(ಕಿವಿಯಲ್ಲಿ) ವಿನಾಯಕಾ, ನಮ್ಮ ಮೂರ್ತಿಯು, ಈ ಆಶ್ರಮದಲ್ಲಿ ಬಂದಿರುವದೇನು ನೋಡು.

ವಿನಾಃ—ಒಳ್ಳೇದು. (ಅತ್ತಿತ್ತ ತಿರುಗಾಡುವನು.)

ಸಿದ್ಧಃ—ವಿಶ್ವಾಸರಾಯರ ಸ್ವಾರಿಯು ಅಕಸ್ಮಾತ್ತಾಗಿ ಬಂದಿದೆ!?

ವಿಶ್ವಾಃ—ಸಿದ್ಧರಾಮಾ, ಸ್ವಾರಿಗೆ ಹುಚ್ಚು ಹಿಡಿದಿದೆ. ಕರುಕಳೆದ ಆಕಳಂತೆ ನಮ್ಮ ಸ್ಥಿತಿಯಾಗಿದೆ!

ಸಿದ್ಧಃ—ಹಾಗಾಗಲಿಕ್ಕೆ ಕಾರಣವೇನು?

ವಿಶ್ವಾ—ಮತ್ತಾವ ಕಾರಣ! ಯಾರೋ ಪಾಪಿಷ್ಟರು ನಮ್ಮ ಗಣಪತಿಯ ಮೂರ್ತಿಯನ್ನೇ ಎತ್ತಿಕೊಂಡೊಯ್ದಿದ್ದಾರೆ. ಅವರ ತೋಳತಿಂಡಿಯೇ ಇದ್ದರೆ, ನಮ್ಮೊಡನೆ ಕಾದಾಡಬೇಕಿತ್ತು; ದೇವರೊಡನೆ ತಮ್ಮ ಪರಾಕ್ರಮ ತೋರಿಸಬೇಕೇ?

ಸಿದ್ಧಃ— ಅಯ್ಯೋ-ಮೂರ್ತಿಯನ್ನು ಕಿತ್ತೊಯ್ದವರಾರು? ಅಂಥ ಪಾಪಿಗಳಿಗೂ, ಈ ಸೊನ್ನಲಾಪುರವು ಆಶ್ರಯವಾಯಿತೇ?

ಕಲ್ಲಿಃ—ಆಬಗ್ಗೆ ನೀವೇನಾದರೂ ಯತ್ನ ನಡಿಸಿರಬಹುದಲ್ಲ!

ವಿಶ್ವಾಃ—ಆ ಖೂಳರು ಸಿಕ್ಕರೆ,—ಅವರನ್ನು ಸೀಳಿ ಒಗೆಯುವೆನು, ಮತ್ತು—

ಪದ—ಧಾಟಿ—“ಏಳಿರೇಳಿರಿ ಶೂರರೆಲ್ಲರು”

ಖಂಡಿಸುವೆನಾ ಚಂಡಪಶುಗಳ ರುಂಡಗಳ ನೀಡಾಡುವೆ ।
ತುಂಡಿಸುವೆನಾ ಮದಗಜಂಗಳ ತೋಳಸುಂಡಿಲು ಸದೆಯುವೆ॥
ನೋಡು ಇಲ್ಲಿದೆ ಕಡುಗವು ।
ಸೂಡುಬಾಣ ಸಮೂಹವು ।
ನೆತ್ತರಿನ ತಳಿಮಾಡಿ ಹೊಡೆಯುವೆ ಭೂಮಿದೇವಿಯು ಶಾಂತಿಗೆ।
ಬಿತ್ತರಿಸೆ, ವಲದೇವಕೀರ್ತಿಯು ಸುತ್ತಲೂ ಜಗಕ್ರಾಂತಿಗೆ ॥೧॥

ಸಿದ್ಧಃ—ಧರ್ಮರಕ್ಷಣೆಗಾಗಿ, ಪ್ರಾಣಾರ್ಪಣಮಾಡುವ ನಿರ್ಧಾರವು ಶ್ರೇಷ್ಠವಾಗಿರುವಂತೆ, ಹಗೆಗಳನ್ನು ನಿರ್ಮೂಲ ಮಾಡುವುದೂ ಒಂದು ಶ್ರೇಷ್ಠೋಪಾಯವಾಗಿದೆ. ಆದರೆ ಅದರ ಪರಿ ಬೇರೆ. ಹಿಂಸೆಯಿಂದಲ್ಲ; ಸಹನಶೀಲತೆಯ ಅಖಂಡಶಸ್ತ್ರದಿಂದ !

ವಿನಾಃ—[ಧಾವಿಸಿ] ವಿಶ್ವಾಸರಾಯರೇ, ಸಿಕ್ಕಿತು ಬನ್ನಿ !

ವಿಶ್ವಾಃ-[ಆತುರ] ಸಿಕ್ಕಿತೇ ? ಮೂರ್ತಿಯೋ ಕಳ್ಳನೋ ?

ವಿನಾಃ—ಬನ್ನಿ. ಬನ್ನಿ ! ಮೂರ್ತಿಯನ್ನು ನೋಡ ಬನ್ನಿ ! ಹೇಗೆ ಬಿದ್ದುಕೊಂಡಿದೆ. [ಎಲ್ಲರೂ ಹೋಗುವರು.]

ಸಿದ್ಧಃ—(ನೋಡಿ) ಈ ಕೃತ್ಯವನ್ನು ಯಾವ ದುಷ್ಟನು ಮಾಡಿದ್ದಾನು !

ವಿಶ್ವಾಃ—ಸಿದ್ಧರಾಮಾ, ಮುಗಿಸು ನಿನ್ನ ಹೂವಿನ ಮಾತುಗಳನ್ನು ! ಈ ಮೂರ್ತಿಯು ನಿನ್ನಾಶ್ರಮದಲ್ಲಿ ಅದೆ ಅಂದ ಮೇಲೆ ನೀನಾಗಲಿ--ನಿನ್ನ ಸೇವಕರಾಗಲಿ ಕದ್ದಿರಬೇಕು. ನೀನು ದೊಡ್ಡ ಮನುಷ್ಯನಾದ್ದರಿಂದ ಕದಿಯಲಿಕ್ಕೆ ಸ್ವತಃ ಹೋಗಿರಲಿಕ್ಕಿಲ್ಲ! ನಿನ್ನ ಸೇವಕರಿಂದಲೇ ಈ ನೀಚ ಕೃತ್ಯವಾಗಿದ್ದೀತು; ಮತ್ತು ಅದಕ್ಕೆ ನಿನ್ನ ಒಪ್ಪಿಗೆಯಾದರೂ ಇದ್ದಿರಲೇಬೇಕು!

ಕಲ್ಲಿ:—ಛೀ, ಛೀ, ಇಂಥ ನೀಚ ಕಾರ್ಯಕ್ಕೆ ನಮ್ಮೆಲ್ಲಾರೂ ಪ್ರವರ್ತರಾಗುವಂತಿಲ್ಲ!

ಗುರು:—ಎಲ್ಲಿಯ ಮಾತು ವಿಶ್ವಾಸರಾಯರೇ, ನಮ್ಮ-ನಿಮ್ಮ ಪಂಥ ಬೇರೆಯಾದರೆ ಇಂಥ ಹೀನ ಕೆಲಸವು ನಮ್ಮಿಂದಾಗಲಾರ ದೆಂದು ನಂಬಿರಿ.

ವಿಶ್ವಾ:—ಅಪರಾಧಿಗಳು ತಮ್ಮ ಅಪರಾಧವನ್ನು ತಾವಾಗಿ ಒಪ್ಪಿಕೊಳ್ಳುವದಿಲ್ಲ ಎಂದೂ!

ವಿನಾ:—ನೀವು ಅಪರಾಧಿಗಳಲ್ಲವಾದರೆ ಹೊಗಲಿ, ನಿಮ್ಮಲ್ಲಿ ಕದ್ದು ತಂದಿಟ್ಟವರನ್ನಾದರೂ ತೋರಿಸಿರಿ; ಅಂದರೆ ನೀವು ನಿರ್ದೋಷಿಗಳು.

ಸಿದ್ಧ:—(ನಕ್ಕು) ಅಪ್ಪಗಳಿರಾ, ವಿಚಾರಿಸಿದರೆ ಈ ಸಂಗತಿಯು ದುಷ್ಟವಿಚಾರದಿಂದ ನಡೆದಂತೆ ತೋರುತ್ತದೆ.

ವಿಶ್ವಾ:—ಏನು ಸಿದ್ಧರಾಮಾ ಮಹಾತ್ಮ-ಸಾಧು ಅನ್ನಿಸಿಕೊಳ್ಳುವಂಥ ನಿನ್ನಲ್ಲಿ ಇಂಥ ಹೀನಕಾರ್ಯಕ್ಕೆ ಆಶ್ರಯ ಸಿಗಬೇಕೇ? ನಿನ್ನ ದೊಡ್ಡಿಸ್ತನವೇನು ಸುಟ್ಟಿತು. ನಿನ್ನ ಸಾಧುವಿನ ಸೋಗು ಇಂಥ ಕಳ್ಳತನಕ್ಕೆ ಉಪಯೋಗವಾಗುವಂತಿದ್ದರೆ ಬೈಲಿಗೆ ಬಾ! ಎಲೋ ಧಾರ್ಮಿಕ ಮತಭೇದಗಳಿದ್ದರೆ ನಮ್ಮೊಡನೆ ಚರ್ಚಿಸಿ ನಮ್ಮನ್ನು ಸೋಲಿಸು! ಅಂದರೆ ಕೀರ್ತಿ ಬಂದೀತು! ನಿನ್ನ ಮತವೇ ಯುಕ್ತವೆಂದು ನಿನ್ನ ಪಾದಸೇವಕರಾಗಿ ಬಿದ್ದುಕೊಳ್ಳಲಿಕ್ಕೆ ಬಂದೀತು! ಮೂರ್ತಿ ಕದ್ದೆ; ನಮ್ಮ ವ್ರತನಿಯಮಗಳನ್ನು ಹಳಿದೆ; ಅಂದರೆ ಯಾವ ಪೌರುಷವನ್ನು ಮಾಡಿದಂತಾಯ್ತು.

(ಇಷ್ಟರಲ್ಲಿ ಊರೊಳಗಿನ ಜನರೆಷ್ಟೋ ನೆರೆದು ಆಶ್ಚರ್ಯವನ್ನು ವ್ಯಕ್ತಪಡಿಸುತ್ತ ಬೆಪ್ಪಾಗಿ ನಿಂತುಕೊಳ್ಳುವರು)

ಗುರು:—ಶ್ರೀಮಂತರೇ, ಸ್ವಲ್ಪ ವಿಚಾರದಿಂದ ಮಾತಾಡಿರಿ.

ಕಲ್ಲಿ:—ನಿಜವಾದ ಅಪರಾಧಿಗಳಾರೆಂದು ನಿರ್ಧರಿಸಿ ಮಾತಾಡಿರಿ.

ವಿಶ್ವಾ:—ಎಲೇ ಮೂರ್ಖಮಂಡಲಿಯೇ, ನಿಮ್ಮಲ್ಲಿ ಇನ್ನೂ ಎಷ್ಟು ಜನರಿದ್ದಾರೆ? ಈ ಮುಷ್ಟಿಯಿಂದ ಒಂದೊಂದೇಟು ಕೊಟ್ಟರೆ, ನೀರುಬೇಡದೆ ಸತ್ತುಹೋಗುವಿರಿ. ಏಕೆ ಇಂಥ ಪೌರುಷದ ಮಾತುಗಳನ್ನಾಡುತ್ತಿರುವಿರಿ? ತಿಳಿದಂತಾಯ್ತು ನಿಮ್ಮ ಗುಣವಂತಿಕೆಯು! ಸಭ್ಯ ಗೃಹಸ್ಥರಲ್ಲಿ ನಿಮ್ಮ ಯೋಗ್ಯತೆಯು ತೂಕ ಮಾಡಿದಂತಾಯ್ತು!

ಸಿದ್ಧ:- [ನಗುತ್ತ] ಎಂಥ ಚಮತ್ಕಾರದ ಸಂಗತಿಯಿದು? ವಿಶ್ವಾಸರಾವ್, ದೇವರು ಮನುಷ್ಯನು ಕರೆತಂದರೆ ಬರುವನೇ? ಎಂದೂ ಬರುವದಿಲ್ಲ. ನಿಮ್ಮ ಗಣೇಶನಾದರೂ ಹಾಗೇ! ಅವನು ತಾನಾಗಿಯೇ ಬಂದಿರಬೇಕು. ತಾನಾಗಿ ಬಂದ ದೇವರನ್ನು ಬೇಕಾದರೆ ಕರಕೊಂಡು ಹೋಗಿರಿ!

ವಿಶ್ವಾ:—ಇನ್ನೂ ಬಿಟ್ಟು ಹೋಗುತ್ತೇವೆಂದು ತಿಳಿದಿರುವಿಯೇನು?

ಕಲ್ಲಿ:—ಹಾಗಲ್ಲ.......ನಿಮ್ಮ ಮೂರ್ತಿಯನ್ನು ನೀವು ತೆಗೆದು ಕೊಂಡು ಹೋಗಿರಿ! ಯಾರದೇನು ಅಡ್ಡಿಯಿಲ್ಲ.

ವಿಶ್ವಾ:—ಸೇವಕರೇ, ಆ ಮೂರ್ತಿಯನ್ನೆತ್ತಿಕೊಂಡು ನಡೆಯಿರಿ!

ಸೇವಕರು:—ಆಗಲಿ, ಹಾಗೇ ಮಾಡುತ್ತೇವೆ. [ಹೋಗುವರು]

ವಿಶ್ವಾ:—ಸಿದ್ಧರಾಮಾ, ಮತ್ತಾರಲ್ಲಾದರೂ ಮೂರ್ತಿ ಸಿಕ್ಕಿದ್ದರೆ, ಅವರನ್ನು ಇಷ್ಟುಹೊತ್ತಿಗೆ, ಇದ್ದರೋ ಇಲ್ಲವೋ ಎನಿಸಿ ಬಿಡುತ್ತಿದ್ದೆ. ಏನುಮಾಡಲಿ?

ಸೇವಕರು:—[ಬಂದು]ಧನಿಯರೇ, ಮೂರ್ತಿಯು ಎತ್ತಲೊಲ್ಲದು!

ವಿಶ್ವಾ:—ಎತ್ತಲೊಲ್ಲದು? ಅದು ಹೇಗೆ? ಹೋಗಿ ನೀವೆಲ್ಲಾ ಪ್ರಯತ್ನಿಸಿರಿ!

ಸೇವ:—ಧನಿಯರೇ, ನಾವೆಲ್ಲಾ ಯತ್ನಿಸಿದೆವಾದರೂ ಅಸಾಧ್ಯವಾಯ್ತು! ಆಮೇಲೆ, ಹಗ್ಗಕಟ್ಟಿ ಎಳೆದೆವು; ಅದಕ್ಕೂ ಅಗಳಾಡಲಿಲ್ಲ.

ವಿಶ್ವಾ:—ಅಗಳಾಡದಿದ್ದರೆ ಹಾರೆ ಹಚ್ಚಿರಿ!

ಸೇವ:—ಹಾಗೂ ಮಾಡಿದೆವು. ಹಾರಿಗಳೇ ಮಣಿದು ಮುರಿಯುವ ಪ್ರಸಂಗ ಬಂದದ್ದರಿಂದ ನಿರುಪಾಯರಾಗಿ ತಮ್ಮ ಕಡೆಗೆ ಬಂದಿದ್ದೇವೆ.

ವಿಶ್ವಾ:—(ಮನ) ತಂದೋಗಿಸುವಾಗ ಒಬ್ಬನೇ ಹೊತ್ತುಕೊಂಡು ಬಂದನು; ಆವರೆ ಈಗೇಕೆ ಹೀಗಾಯ್ತು.

ಕಲ್ಲಿ:—ಏಕೆ ವಿಶ್ವಾಸರಾಯರೇ, ಇಂಥ ಮೇವರು ತಾನಾಗಿಯೇ ಬಂದಿರುವದರಲ್ಲಿ ಸಂಶಯವೇನು? ಎತ್ತಿಕೊಂಡು ತಂದಿದ್ದರೆ, ಎತ್ತಿಕೊಂಡೊಯ್ಯಲಿಕ್ಕೆ ಬರುತ್ತಿತ್ತು!

ವಿಶ್ವಾ:—[ಮನ] ಇದೇನಿದು? ನಮ್ಮ ಅಪಮಾನದ ಹೊತ್ತೇ ಬಂದಿತಲ್ಲ! (ಕುಂತು) ಸೇವಕರೇ—ಹೋಗಿರಿ. ಹಗ್ಗಕಟ್ಟಿ ಎತ್ತುಕೋಣಗಳಿಂದೆಳಿಸಿರಿ!

ಸೇವ:—ಒಳ್ಳೇದು. ಸ್ವಾಮಿ. (ಹೋಗುವರು.)

ಗುರು:—ಮಹಾಶಯರೇ, ನಿಮ್ಮ ದೇವರು ನಿಮ್ಮೊಡನೆ ಬರಲೊಲ್ಲನಲ್ಲ!

ವಿಶ್ವಾ:—ಬಾರದೆ ಏನು? ಆ ಹೇಡಿಗಳಿಂದ ಎತ್ತಲಿಕ್ಕಾಗದಿದ್ದರೆ, ದೇವರು ಬಾರದಂತಾಯಿತೇ?

ಕಲ್ಲಿ:—ನಿಮ್ಮ ದೇವರು ನಿಮ್ಮ ಸ್ವಾಧೀನದಲ್ಲಿಲ್ಲದಿರುವಾಗ, ಹೆರರ ಮೇಲೆ ಹರಿಹಾಯುವುದು ಧೀರರ ಲಕ್ಷಣವೇ!

ಸಿದ್ಧ:—ಎಲೇ ಗುಡ್ಡರೇ, ಅತ್ಯುಗ್ರವಾದ ವಿಷದಡಿಗೆಯನ್ನು ಸಿದ್ಧಪಡಿಸಿರಿ! ಅರಿಗಳಿಗೆಯಲ್ಲೇ ಆಗಬೇಕು.

ಗುಡ್ಡ:—ಕಣ್ಮುಚ್ಚಿ ಕಣ್ತೆರೂವದರಾಗ ಮಾಡ್ತೆವರೀ ದೇವರೂ. (ಹೋಗುವರು)

ಸೇವ:—(ಬಂದು) ಧನಿಯರೇ, ನಮ್ಮಾಟವು ನಿಂತಿತು! ಕೋಣಗಳಿಂದೆಳೆಸಿದರೂ ಎಳೆಯದು!

ವಿಶ್ವಾ:—(ಮನ) ಇದೇನೋ ಈ ಸಿದ್ಧರಾಮನ ತಂತ್ರವಿರುತ್ತದೆ; ನಾನು ತಿಳಿಯದೆ ಈ ಸನ್ಯಾಸಿಯ ತೆಕ್ಕೆಗೆ ಬಿದ್ದೆ; ಈಗೇನು ಮಾಡಲಿ ? ದರ್ಪವನ್ನು ಬಿಡದೆ ಇಲ್ಲಿಂದ ಪಾರಾಗಿ ಹೋಗುವ ಯುಕ್ತಿ ತೆಗೆಯುವೆ.

ಕಲ್ಲಿ:—ಆಯ್ಯಾ, ಕೇಳಿದಿರಾ ? ನಿಮ್ಮ ವಿಶ್ವಾಸ ದೇವರಲ್ಲಿಲ್ಲ, ದೇವರ ವಿಶ್ವಾಸವು ನಿಮ್ಮಲ್ಲಿಲ್ಲ ! ಅಂತೇ, ಪ್ರಶಸ್ತವಾದ ಸ್ಥಳವನ್ನು ನಿಮ್ಮ ದೇವರು ಬಿಡಲೊಲ್ಲನು !

ಗುರು:—ಮೇಲುಗಟ್ಟೆ ಮಾತಾಡಿದ, ಮೂರ್ತಿಯು ನಿಮ್ಮ ಕೈ ಬಿಟ್ಟಿತಲ್ಲ !

ವಿಶ್ವಾ:—(ಮನ) ಅಯ್ಯೋ ಈ ಹಾಳುಕುನ್ನಿಗಳು, ಎಷ್ಟು ಕಿರಚ ಹತ್ತಿದವಲ್ಲ ! ಎಲಾ, ಇವುಗಳ ಮೇಲೆ ಕಲ್ಲುಹಾಕಲಿ !

ಗುಡ್ಡರು:—ದೇವರೂ, ಅಡಿಗಿ ತಯ್ಯಾರಾಗೈತಿರಿ.

ಸಿದ್ಧ:—ಆಯಿತೇ ? ಇಲ್ಲಿಟ್ಟು ನಿಮ್ಮ ಕೆಲಸಕ್ಕೆ ಹೋಗಿರಿ. ಕಲ್ಲಿದೇವ, ಈ ಅಡಿಗೆಯನ್ನು ಗಣೇಶನ ನೈವೇದ್ಯ ಮಾಡಿಕೊಂಡು ಬಾ.

ಕಲ್ಲಿದೇವ:—ಸ್ವಾಮಿಗಳ ಇಷ್ಟ! (ಎಂದು ಹೋಗುವನು)

ವಿಶ್ವಾ:—ಇದೇನು ತಂತ್ರನಡೆಯಿತು ? ಆಯಿತು ನನ್ನ ಆಯುಷ್ಯವೇ ಮುಗಿಯಿತು. ಮಾನಹೋದಮೇಲೆ ಮರಣ ಬಂದಂತೆಯೇ ಅಲ್ಲವೇ ?

ಸಿದ್ಧ:—ವಿಶ್ವಾಸರಾಯರೇ, ನಿಮ್ಮ ಗಣೇಶಭಕ್ತಿಯನ್ನು ಕಂಡು, ನಾನು ಬಲು ಸಂತೋಷಪಟ್ಟೆ; ಭಕ್ತಿಯು, ಮನುಷ್ಯನಿಗೆ ಭೂಷಣಪ್ರಾಯವಾದದ್ದು. [ಕಲ್ಲಿದೇವ ಬರುವನು] ಆದ್ದರಿಂದ, ಇಗೋ ಗಣೇಶನ ಪ್ರಸಾದವು ಬಂದಿದೆ. ಅದನ್ನು ತಮ್ಮ ಮಂಡಲಿಯೊಡನೆ ಸ್ವೀಕರಿಸಿರಿ !

ವಿಶ್ವಾ:— ಎಲೋ ಸಿದ್ಧರಾಮಾ, ಕೆಸರೊಳಗಿನ ಮುಳ್ಳಿನಂಥ ಮಾತುಗಳಿಗೆ ನನ್ನಂಥವನು ಎಂದೂ ಬಲೆ ಬೀಳಲಿಕ್ಕಿಲ್ಲ; ಈ ವಿಶ್ವಾಪರಾಯನು ಇಂಥ ಎಷ್ಟೋ ಬಲೆಗಳನ್ನು ನಿರ್ಮಿಸಬಲ್ಲನು. ತಿಳಿಯಿತೇ?

ವಿಸಾ:— ಅಪ್ಪಾ-ಸಾಧುಗಳ ನಡತೆಯು ಚೆನ್ನಾಗಿಯೇ ಇದೆ. ವಿಷವನ್ನುಣಿಸಿ ನಮ್ಮನ್ನು ಕೊಲ್ಲಬೇಕೆನ್ನುವ ದುಷ್ಟ ವೃತ್ತಿಯನ್ನಿಟ್ಟುಕೊಂಡು ಮೇಲೆ ಇಂಥ ತಪಸ್ವಿಯ ವೇಷ ಧರಿಸಿರುವಿಯಾ?

ಸಿದ್ಧ:— [ನಗುತ್ತ] ಹಾಗಲ್ಲಪಪ್ಪಾ-ನಿಮ್ಮ ದೇವರ ಪ್ರಸಾದಕ್ಕೆ ವಿಷವೆನ್ನುವಿರಾ? ನೀವು ನಂಬಿದ ದೇವರು ನಿಮ್ಮನ್ನು ಸಾಯಗೊಡುವನೇ?

ವಿಶ್ವಾ:—(ಸಿಟ್ಟಿನಿಂದ) ಸಾಕುಸಾಕು! ಇಂಥ ಯುಕ್ತಿವಾದಗಳನ್ನು ನಾನೆಂದೂ ಕೇಳಲಾರೆ.

ಪದ—ಧಾಟಿ—'ಕಾಡಿಗೆ ಬನ್ನಿರಿ ನೀವೀಗ'

ಕೇಳೆನು ಈತೆರ ವಿಷನುಡಿಯ।

ಸಿದ್ಧ:— ತಾಳಿರಿ! ಸೇವಿಸಿ! ಈ ಎಡೆಯ॥

ವಿಶ್ವಾ:— ಬಿಡು ಬಿಡು! ಈ ಬಲೆವು ಗಲಾರೆ।

ಸಿದ್ಧ:— ತಡೆ ತಡೆ! ಪೋಪರೇ।

ವಿಶ್ವಾ:— ಛೀ ಛೀ ಛೀ — ॥೧॥

ವಿಶ್ವಾ:— ಕೂಸುಗಳ ಕೈಯಲ್ಲಿ ಬೆಲ್ಲ ಕೊಟ್ಟಂತೆ ಸವಿಸವಿಯು ನುಡಿಗಳನ್ನು ಬೆರಿಸಿ ವಿಷವನ್ನುಣ್ಣಿಸ ಬಂದ ಅನ್ನದಾನಿಯೇ, ನೀನು ಮಹಾತ್ಮನು, ಭಕ್ತನು ಆಗಿರುವಿ! ಅದೇ ಪ್ರಸಾದವನ್ನು ನೀನು ಸ್ವೀಕರಿಸುವಿಯಾ?

ಗುರು:— ಅವರೇಕೆ? ನಾವೇ ಸ್ವೀಕರಿಸುತ್ತೇವೆ.

ಕಲ್ಲಿ:— ಮಂದಮತಿಗಳಾದ ಗುಡ್ಡರೂ ಸ್ವೀಕರಿಸಬಲ್ಲರು!

ವಿಶ್ವಾ:—ಮಂದಮತಿಗಳಾದ ಅವರು ಸ್ವೀಕರಿಸುವದೇ ಅರಿದು!

ಸಿದ್ಧ:— ಈ ಪ್ರಸಾದವು ವಿಷಮಯವೇ? ನಿಲ್ಲಿರಿ. ಎಲೇ ಗುಡ್ಡರೇ!

ಗುಡ್ಡರು:— ಯಾಕ್ರೀ ದೇವರೂ!

ಸಿದ್ಧ:— ಪ್ರಸಾದಕ್ಕೆ ಬನ್ನಿರೋ!

ವಿಶ್ವಾ:—. ಬನ್ನಿರೋ! ಸಾಯಲಿಕ್ಕೆ.

ಗುಡ್ಡ:— ಬರ್ರ್ಯೋ ಚುಕ್ಕೋಳ್ಯಾ ಅಪ್ಪಗೋಳು ಪರಸಾದ ಹಂಚತಾರಂತ! ಔಡ್ಲ ಎಲೀ ತಗೊಂಬರ್ರ್ಯೋ. (ಎಲ್ಲರೂ ನೆರೆಯುವರು)

ಸಿದ್ಧ:— ಎಲ್ಲರೂ ಸಾಲಾಗಿ ಕುಳಿತುಕೊಳ್ಳಿ. ಕಲ್ಲಿದೇವಾ ಇವರಿಗೆ ಉಣ್ಣಬಡಿಸು!

ಕಲ್ಲಿ:— ಹಾಗೇ ಮಾಡುತ್ತೇನೆ. (ಉಣ್ಣಬಡಿಸುವನು)

ವಿಶ್ವಾ:— ಎಲೋ ಕೆಂಚರೇ, ಅದು ವಿಷವದೆ! ಅವನ್ನುಂಡು ವ್ಯರ್ಥವಾಗಿ ಸಾಯುವಿರಲ್ಲ! ಸಿದ್ಧರಾಮಾ ಇದು ಯೋಗ್ಯವಲ್ಲ! ಪಾಪ ಬಡಪ್ರಾಣಿಗಳನ್ನು ವಿಷವುಣಿಸಿ ಕೊಲ್ಲಬೇಡ.

ಗುಡ್ಡ:— ನನ್ನಪ್ಪನ ಪರಸಾದ ವುಂಡರೆ ಸಾಯುವೆವೇ? ನಮ್ಮ ಸಿದ್ಧದೇವರ ಅನುಗ್ರಹದಿಂದ ವಿಷವು ಅಮೃತವೇ ಆಗುವದು. (ಉಣಹತ್ತುವರು) ಜಯ್ ಮಲ್ಲೇಶಾ.

**ಪದ—ಧಾಟಿ—'ಎಲ್ಲಿದ್ದನಯ್ಯ ನಮ್ಮ ಲ್ಲರ'**

**ಗುರುಪರಸಾದದ ಸವಿಯೇನು ಹೇಳಲಿ।**
**ನರಲೋಕ ಜನರಿಗೆ ಅಮೃತವು ॥ಪ॥**
**ರೋಗಿಗೆ ಔಷಧ, ಯೋಗಿಗೆ ಹಂಪಲ।**
**ಸೋಗಿನ ಭಕುತಗೆ ವಿಷವಯ್ಯಾ ॥೧॥**
**ಶಕ್ತಿಯುಹೆಚ್ಚಿಸಿ ಬುದ್ಧಿಯುಬೆಳೆಯಿಸಿ।**
**ಮುಕ್ತಿಯ ಕೊಡುವಂಥ ಪರಸಾದವು ॥೨॥**

ಸಿದ್ಧ:— ಗುಡ್ಡರೇ ಸಂತೋಷವಾಯಿತೇ?

ಗುಡ್ಡ:—ದೇವರೂ ಅದೆಂಥಾ ಸಂತೋಸ. ನಮಗೇ ಹೇಳಲಿಕ್ಕೇ ಬರೊಲ್ಲದು.

ಸಿದ್ಧಃ—(ನಗುತ್ತ) ಒಳ್ಳೇದು ನಿಮ್ಮ ಕೆಲಸಕ್ಕೆ ತೆರಳಿರಿ.

ಕಲ್ಲಿಃ—ನೋಡಿದಿರಾ ವಿಶ್ವಾಸರಾಯರೇ ! ವಿಶ್ವಾಸವಿಡಿರಿ ಇನ್ನಾದರೂ ವಿಶ್ವಾಸರಾಯರೇ.

ವಿಶ್ವಾಃ—(ಮನ) ಸತ್ತೆ ಸತ್ತೆ ! ಈ ದೃಶ್ಯವು ಭೂತರಾಕ್ಷಸವಾಗಿ ನನ್ನನ್ನಂಜಿಸಿ ಕೊಂದಿತು. (ಕುರಿತು) ಸಿದ್ಧೇಶಾ, ನಿನ್ನ ಮಹಾತ್ಮ್ಯೆಯನ್ನರಿಯದೆ ಛಲಿಸಿದ್ದಕ್ಕೆ ಕ್ಷಮಿಸು! ನಾವಿನ್ನು ಹೊರಡುವೆವು.

ಸಿದ್ಧಃ—ನಂಬಿಗೆಯಿಟ್ಟರೆ ಯಾವ ದೇವರಾದರೂ ಒಲಿಯುವನು. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ವರ್ತಿಸಿರೆಂದು ನಿಮಗೇನು ಹೇಳುವದು? ಒಳ್ಳೇದು ಹೋಗಿ ಬನ್ನಿ! (ಹೊರಡುವರು)

ಗುರುಃ—(ವಂದಿಸಿ) ಸ್ವಾಮಿಗಳು ಏನೋ ಯೋಚಿಸುತ್ತಿರುವುದಾಗಿ ಕಾಣುತ್ತೆ.

ಸಿದ್ಧಃ—ಮತ್ತೇನೂ ಇಲ್ಲ! ಈ ಜಗತ್ತಿನಲ್ಲಿಯ ನನ್ನ ಕಾರ್ಯಗಳೆಲ್ಲ ತೀರಿದಂತಾದುವು; ಇನ್ನು ಆ ಪರಮಾತ್ಮನ ಸನ್ನಿಧಿಯನ್ನು ಸೇರಬೇಕೆನ್ನುವೆ.

ಕಲ್ಲಿ:—(ಮನ) ಅಯ್ಯೋ ಸಿದ್ಧೇಶಾ; ಇಷ್ಟು ಬೇಗ ಆತುರವಾದುದೇಕೆ?

ಸಿದ್ಧಃ—ಭಕ್ತರೇ ನಿಮ್ಮ ಭಕ್ತಿಮಾರ್ಗವನ್ನು ಹಾಗೆಯೇ ಸಾಗಿಸುತ್ತಿರಿ; ಜಗತ್ತಿನಲ್ಲಿ ಡಾಂಭಿಕಾಚಾರವನ್ನು ಮುಳುಗಿಸಿರಿ. ವ್ರತನಿಯಮಗಳಲ್ಲಿ ಜೀವಕಳೆ ತುಂಬಿರಿ. ದಯಾಧರ್ಮವನ್ನು ಬೆಳದಿಂಗಳಂತೆ ಸರ್ವವ್ಯಾಪಿಯನ್ನಾಗಿ ಮಾಡಿರಿ. ಗೋಗಳನ್ನು ಸಲಹಿರಿ. ಕಸಬುಗಳನ್ನು ಉಳಿಸಿರಿ. ಕಾಯಕವೇ ಕೈಲಾಸವೆನ್ನುವುದನ್ನು ಮರೆಯದೆ ಕಾಯಕದಲ್ಲಿ ನಿರತರಾಗಿ ಲೋಕಕಲ್ಯಾಣಕ್ಕೆ ಭಾಗಿಗಳಾಗಿರಿ. ಆಯ್ತು, ನಿಮ್ಮ ಹಾದಿಯಲ್ಲಿ ಪರಮಾತ್ಮನ ಸಹಾಯ ಪಡೆದುಕೊಳ್ಳಿರಿ! (ಆಸನ ಹಾಕಿ ಕುಳ್ಳಿರುವನು)

ಕಲ್ಲಿ: — ಆಹ್ಹಾ! ಜ್ಯೋತಿಯು ಮಹಾಜ್ಯೋತಿಯಲ್ಲಿ ಬೆರೆತು ಹೋಯಿತು! ಭಕ್ತಿಸಾಮ್ರಾಜ್ಯದ ಸಾರ್ವಭೌಮನು ದೇವಲೋಕದೊಡೆಯನಾದನು. ಆಹ್ಹಾ! ಭಕ್ತಶಿಖಾಮಣೀ.

ಗುರು:— ಅಗೋ, ನೀಲವಾದಾಕಾಶದಲ್ಲಿ ನನ್ನ ಸಿದ್ಧನ ನೈರ್ಮಲ್ಯವು ಕಂಗೊಳಿಸುತ್ತಿದೆ. ನನ್ನೊಡೆಯನ ಸೂಕ್ಷ್ಮಶರೀರವು ಚಿಕ್ಕೆಯಾಗಿ ನಮಗೆ ಮಾರ್ಗದರ್ಶಕವಾಗಲಿ! ಜಯಸಿದ್ಧೇಶಾ! ಓಂಸಿದ್ಧೇಶಾ!

[ ಇಬ್ಬರೂ ಸ್ತುತಿಸುವರು ]

## ಭರತವಾಕ್ಯ.

ಕಂದ॥ ಹೊರಗಿನ ಹಿರಿತನ ಬೇಡೈ।
ಹೊರಗೊಳಗೂ ಸೂಸಿ ಹರಿವ ಕಿರಿತನ ನೀಡೈ ॥
ಮಿರುಗಿನ ಮಿಂಚಿನ ಸರಿಯೋ।
ಕೊರಗಿಪಕತ್ತಲೆಯ ಥೊರೆಯೆ ಲೀಲೆಯ ಸಿರಿಯೆ ॥

೩ನೇ ಅಂಕು ಮುಗಿದುದು.



# ಶ್ರೀಸಿದ್ಧರಾಮನ ಸಮತೆ.

ಆವನಾಗಿ ಒಬ್ಬನು ನಿಡುಮುಳ್ಳಿನ ಮೇಲೆ ಪೊರಳ್ಚುಗೆಯು. ಮೇಣು ಪಾಂಸೆಯು ಹಾಸಿನ ಮೇಲೆ ಪೊರಳ್ಚುಗೆಯು. ಪೊರಳ್ಚಿಡಡೆ ಮನೆ ವಿಷ್ಕಂದವಾಗದೊಂದೀಯುಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾ ಗುಣ ಎನ್ನನೆಂದು ಪೊರ್ದಿಪ್ಪುದು ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಆವನಾಗಿ ಒಬ್ಬನು ಅವಿಚಾರದಿಂದ ಶಿರಸ್ಸಿನ ಮೇಲೆ ಕೈದುವ ನಿಕ್ಕುಗೆಯು. ಮೇಣು ಗಂಧಾಕ್ಷತೆ ಪುಷ್ಪದಲ್ಲಿ ಪೂಜೆ ಮಾಡುಗೆಯು. ಪೂಜೆ ಮಾಡಿದಡೆ ಮನವಿಷ್ಕವಾಗದೊಂದೀಯುಂದವಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾಗುಣ ಎನ್ನನೆಂದು ಪೊರ್ದಿರ್ಪುದು ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಆವನಾನೋರ್ವನು ನಾಸ್ತಿಕವನಾಡಿ ನಗುತಿಪ್ಪುದನು ತಾ ಕೇಳಿ, ಮತ್ತಾವನಾಗಿ ಬಂದು ಪೇಳ್ದೊಡೆ, ಮನವಿಸ್ಕಂದವಾಗದೊಂದೀ ಯುಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊರ್ದಿಪ್ಪುದು ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಆವನಾಗಿ ಒಬ್ಬನು ಕರವಪಿಡಿದು ಒಡಗೊಂಡೊಯ್ದು ಒಳ್ಳಿ ತ್ತನಾದರೂ ನೀಡುಗೆಯು. ಮೇಣು ಮಣ್ಣನಾದರೂ ನೀಡುಗೆಯು. ನೀಡಿ ದೊಡೆ ಮನವಿಸ್ಕಂಪವಾಗದೊಂದೀಯುಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊಂದಿರ್ಪುದು ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಸಿರಿಯಾಯಿತ್ತೆಂದು ಉಚ್ಚಹದಿಂದುಬ್ಬಿದೆ, ಕೆಟ್ಟಿತೆಂದು ಮನ ನೊಂದು ಭಿನ್ನನಾದಂತಿರಬೇಡಾ ಹಿರಿಯರ ಮತ. ಮನವಿಸ್ಕಂದವಾಗ

ಂದ್ರಿಯಂಗದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾಗುಣ ಎನ್ನ ನೆಂದು ಬಂದು ಪೊಂದಿರ್ಪುದು ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಆರೇನೆಂದರೂ ಓರಂತಿಪ್ಪುದೇ ಸಮತೆ. ಆರುಜರಿದರೂ, ಅವರೆನ್ನ ಮನದ ಕಾಳಿಕೆಯ ಕಳೆದರೆಂಬುದೇ ಸಮತೆ. ಆರುಸ್ತೋತ್ರ ಮಾಡಿಹರೆನ್ನ ಜನ್ಮದ ಹಗೆಗಳೆಂಬುದೇ ಸಮತೆ. ಇಂತಿದು ಗುರುಕಾರುಣ್ಯ. ಮನವಚನಕಾಯದಲ್ಲಿ ಅಹಿತವಿಲ್ಲದೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ, ನಿಮ್ಮವರ ನೀನೆಂಬುದೇ ಸಮತೆ.



ಇದನ್ನು ವಿಜಾಪುರದಲ್ಲಿ ಡಾ. ಸಾ. ಫ. ಗು. ಹಳಕಟ್ಟಿ ವಕೀಲ
ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ
ಮುದ್ರಿಸಿದರು.

ಮತ್ತು ಶ್ರೀ. ಸಿಂಪಿ ಲಿಂಗಣ್ಣನವರು ಶ್ರೀಸಿದ್ಧೇಶ್ವರ
ಸಂಸ್ಥೆಯ ವತಿಯಿಂದ ಅಲ್ಲಿಯೇ ಪ್ರಕಟಿಸಿದರು.